ಎಂ. ಫಿಲ್ ಪದವಿಯ ಅವಶ್ಯಕತೆಗಾಗಿ
ಕನ್ನಡ ವಿಶ್ವವಿದ್ಯಾಲಯ, ಹಂಪೆಗೆ ಸಾದರ ಪಡಿಸಿದ
ಪ್ರೌಢ ಪ್ರಬಂಧ
2008

# ಸಂತ ಶಿಶುನಾಳ ಶರೀಫರ ತತ್ತ್ವಪದಗಳಲ್ಲಿ ಅಧ್ಯಾತ್ಮ

ಸಂಶೋಧನೆ
ವಾಗೀಶ ಎಸ್. ಶಾಸ್ತ್ರೀ

****

ಮಾರ್ಗದರ್ಶನ
ಡಾ। ಪಾದೇಕಲ್ಲು ವಿಷ್ಣು ಭಟ್

ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ
ಎಂ.ಜಿ.ಎಂ. ಕಾಲೇಜು, ಉಡುಪಿ

641

ಎಂ. ಫಿಲ್ ಪದವಿಯ ಅವಶ್ಯಕತೆಗಾಗಿ
ಕನ್ನಡ ವಿಶ್ವವಿದ್ಯಾಲಯ, ಹಂಪೆಗೆ ಸಾದರ ಪಡಿಸಿದ
ಪ್ರೌಢ ಪ್ರಬಂಧ
2008



# ಸಂತ ಶಿಶುನಾಳ ಶರೀಫರ ತತ್ತ್ವಪದಗಳಲ್ಲಿ ಅಧ್ಯಾತ್ಮ

ಸಂಶೋಧನೆ
ವಾಗೀಶ ಎಸ್. ಶಾಸ್ತ್ರೀ




****

ಮಾರ್ಗದರ್ಶನ
ಡಾ। ಪಾದೇಕಲ್ಲು ವಿಷ್ಣು ಭಟ್

ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ
ಎಂ.ಜಿ.ಎಂ. ಕಾಲೇಜು, ಉಡುಪಿ

# ಪ್ರಮಾಣ ಪತ್ರ

'ಸಂತ ಶಿಶುನಾಳ ಶರೀಫರ ತತ್ತ್ವಪದಗಳಲ್ಲಿ ಅಧ್ಯಾತ್ಮ' ಎಂಬ ಶೀರ್ಷಿಕೆಯ ಈ ಪ್ರೌಢ ಪ್ರಬಂಧವನ್ನು ಎಂ.ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿ ಇಲ್ಲಿಗೆ ಸಾದರಪಡಿಸಲೆಂದು ನಾನು ಡಾ. ಪಾದೇಕಲ್ಲು ವಿಷ್ಣು ಭಟ್, ಪ್ರಾಂಶುಪಾಲರು, ಸರಕಾರೀ ಪ್ರಥಮ ದರ್ಜೆ ಕಾಲೇಜು, ಹಿರಿಯಡಕ, ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಈ ಸಂಶೋಧನಾ ಪ್ರೌಢ ಪ್ರಬಂಧದ ವಿಷಯವನ್ನು ಈ ಮೊದಲು ಯಾವುದೇ ಪದವಿಗಾಗಲೀ ಅಥವಾ ಯಾವುದೇ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲ ಎಂದು ಘೋಷಿಸುತ್ತೇನೆ.

(ವಾಗೀಶ ಎಸ್. ಶಾಸ್ತ್ರೀ)

ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ,
ಎಂ.ಜಿ.ಎಂ. ಕಾಲೇಜು, ಉಡುಪಿ.

ದಿನಾಂಕ: ೨೧.೦೫.೨೦೦೯

## ದೃಢೀಕರಣ ಪತ್ರ

ಶ್ರೀ ವಾಗೀಶ ಎಸ್. ಶಾಸ್ತ್ರೀ ಅವರು 'ಸಂತ ಶಿಶುನಾಳ ಶರೀಫರ ತತ್ತ್ವಪದಗಳಲ್ಲಿ ಅಧ್ಯಾತ್ಮ' ಎಂಬ ಶೀರ್ಷಿಕೆಯ ಈ ಪ್ರೌಢ ಪ್ರಬಂಧವನ್ನು ಎಂ.ಫಿಲ್. ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವ ವಿದ್ಯಾಲಯ ಹಂಪಿ, ಇಲ್ಲಿಗೆ ಅರ್ಪಿಸಲೆಂದು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದುದಾಗಿದೆ. ಈ ನಿಬಂಧವು ಸಂಶೋಧಕರು ತಮ್ಮ ಸ್ವಂತ ಸಂಶೋಧನೆಯ ಮೂಲಕ ರೂಪುಗೊಳಿಸಿದುದಾಗಿದೆ. ಈ ನಿಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಪದವಿಗಾಗಲೀ ಉದ್ದೇಶಗಳಿಗಾಗಲೀ ಬಳಸಲಾಗಿಲ್ಲ ಎಂದು ದೃಢೀಕರಿಸುತ್ತೇನೆ.

(ಡಾ. ಪಾದೇಕಲ್ಲು ವಿಷ್ಣು ಭಟ್)
ಪ್ರಾಂಶುಪಾಲರು,
ಸರಕಾರಿ ಪ್ರಥಮ ದರ್ಜೆ ಕಾಲೇಜು,
ಹಿರಿಯಡಕ.

ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾಕೇಂದ್ರ,
ಎಂ.ಜಿ.ಎಂ. ಕಾಲೇಜು, ಉಡುಪಿ.

ದಿನಾಂಕ: ೨೧.೦೫.೨೦೦೯

# ಅನುಕ್ರಮಣಿ

## ಸಂತ ಶಿಶುನಾಳ ಶರೀಫರ ತತ್ತ್ವ ಪದಗಳಲ್ಲಿ ಅಧ್ಯಾತ್ಮ

# ಅಧ್ಯಾಯ - ೧

೧.೧ ಪ್ರಸ್ತಾವನೆ.

೧.೨ ಭಾರತದ ಧಾರ್ಮಿಕ ಆಧ್ಯಾತ್ಮಿಕ ಬೆಳವಣಿಗೆಯ ಪಕ್ಷಿನೋಟ.

೧.೩ ಇಸ್ಲಾಂ-ಸೂಫಿಗಳ ಪ್ರವೇಶ ಹಾಗೂ ಪ್ರಭಾವಗಳು.

೧.೪ ಅಧ್ಯಾತ್ಮ ಸಾಧಕ- ಅನುಭಾವಿ ಸಂತ ಶಿಶುನಾಳ ಶರೀಫರು.

# ಸಂತ ಶಿಶುನಾಳ ಶರೀಫರ ತತ್ತ್ವಪದಗಳಲ್ಲಿ ಅಧ್ಯಾತ್ಮ.

## ಅಧ್ಯಾಯ – ೧

### ೧.೧. ಪ್ರಸ್ತಾವನೆ.

ಆತ್ಮನನ್ನು – ಪರಮಾತ್ಮನನ್ನು ಕುರಿತಾದ ಚಿಂತನೆಯನ್ನು, ಅದರ ಸ್ವರೂಪದ ಕುರಿತಾದ ಜಿಜ್ಞಾಸೆಯನ್ನು, ತತ್ತ್ವಜ್ಞಾನದ ಅನ್ವೇಷಣೆಯನ್ನು 'ಅಧ್ಯಾತ್ಮ' ಎನ್ನುತ್ತಾರೆ. ಜಿಜ್ಞಾಸುಪ್ರವೃತ್ತಿ ಹೊಂದಿದ ಮನುಷ್ಯ, ದು:ಖರಹಿತವಾದ ಆನಂದಮಯಸ್ಥಿತಿಯನ್ನು ಹಾಗೂ ಪರಿಪೂರ್ಣತೆಯ ಪ್ರಾಪ್ತಿಯನ್ನು ಲಕ್ಷ್ಯವಾಗಿ ಇಟ್ಟುಕೊಂಡು, ತನ್ನನ್ನು ಮತ್ತು ಸುತ್ತಣ ಜಗತ್ತನ್ನು ಕೌತುಕದಿಂದ ಪರಿಶೀಲಿಸುತ್ತಾನೆ, ಪರೀಕ್ಷಿಸುತ್ತಾನೆ. ಅವುಗಳ ಯಥಾರ್ಥಸ್ವರೂಪ–ಲಕ್ಷಣಗಳನ್ನು ನಿಶ್ಚಯಿಸಿ ಕೊಳ್ಳುತ್ತಾನೆ. ಈ ಬಗೆಯ ಕೌತುಕವೇ ಎಲ್ಲ ತತ್ತ್ವಜ್ಞಾನಿಗಳ ತಾಯಿ. ಧ್ಯಾನ –ತಪಸ್ಸು– ಅನ್ವೇಷಣೆ ಮುಂತಾದ ಸಾಧನ ಮಾರ್ಗಗಳ ಸಹಾಯದಿಂದ ತನ್ನ ತಾತ್ತ್ವಿಕವೃತ್ತಿಯನ್ನು ವಿಕಾಸಗೊಳಿಸುತ್ತಾನೆ. ಪಡೆದ ಜ್ಞಾನವನ್ನು ಅನುಭವವಾಗಿಸಿಕೊಂಡು ಆತ್ಮ ಸಾಕ್ಷಾತ್ಕಾರ ಮಾಡಿಕೊಳ್ಳುತ್ತಾನೆ. ಇದೇ ಆತ್ಮಾನುಭೂತಿ – ಅನುಭಾವ. ಎಲ್ಲ ತತ್ತ್ವಜ್ಞಾನಿಗಳ ಅಂತಿಮಸಾಧ್ಯ.[೧]

ಗೂಢಾದ್ಗೂಢತರವೆನಿಸುವ ಸತ್ಯಸ್ವರೂಪದ ಅರಿವಿನ ಆಸಕ್ತಿಯೊಂದಿಗೆ ಸಕಲ ಜನ ಸಮುದಾಯದ ಸುಖ– ಕ್ಷೇಮಗಳನ್ನು ಸಾಧಿಸುವ ಆಳವಾದ ಹಂಬಲ ಸೇರಿದಾಗ, ಜಿಜ್ಞಾಸುವಾದ ಸಾಧಕನ ಪ್ರಯತ್ನ, ಫಲಗಳು ಕೇವಲ ವೈಯಕ್ತಿಕವಾಗಿ ಉಳಿಯುವುದಿಲ್ಲ. ಆತ್ಮದೃಷ್ಟಿಯು ವಿಶ್ವದೃಷ್ಟಿಯಾಗುತ್ತದೆ. ಅವನ ಯತ್ನ ಹಾಗೂ ಫಲಿತಗಳು ಭವಿಷ್ಯತ್ತಿನ ಜನಸಮೂಹಗಳಿಗೆ ನಿರಂತರ ಬೆಳಕಾಗಿ ಸ್ಥಿರವಾಗಿ ನಿಲ್ಲುತ್ತವೆ. ಮಂತ್ರದ್ರಷ್ಟಾರರಾದ ವೇದೋಪನಿಷತ್ತುಗಳ ಋಷಿಗಳು, ಜ್ಞಾನಪ್ರಬುದ್ಧನಾದ ಭಗವಾನ್ ಬುದ್ಧ, ಭಗವದ್ಗೀತೆಯನ್ನು ಲೋಕಕ್ಕೆ ನೀಡಿದ ಕೃಷ್ಣ, ವಚನಕಾರರಾದ ಶರಣರು, ದಾಸಪಂಥಾನುಯಾಯಿಗಳು ಇವರೆಲ್ಲ ಅಧ್ಯಾತ್ಮ ಜ್ಞಾನದ ದೀವಿಗೆ ಹಿಡಿದು ಸಹಸ್ರ ಮಾನಗಳಿಂದ ಜನಜೀವನದ ಉದ್ಧಾರಕ್ಕಾಗಿ ನಡೆದಿದ್ದಾರೆ.

ಭಾರತದೇಶ ಪ್ರಾಚೀನತಮಕಾಲದಿಂದ ವಿದ್ಯಾಪರಂಪರೆಯ ಜನ್ಮಭೂಮಿ, ಆಶ್ರಯ ಭೂಮಿ. ಲೌಕಿಕವಾದ ಸುಖಾನುಕೂಲಗಳನ್ನು ಪೂರೈಸುವ ಪೋಷಿಸುವ ಶಾಸ್ತ್ರಗಳು–ಲಲಿತ ಕಲೆಗಳು ಬಹಳ ವಿಸ್ತಾರವಾಗಿ, ಗಾಢವಾಗಿ ಬೆಳೆದಿವೆ. ಅವುಗಳೊಡನೆ ತ್ಯಾಗ–ವೈರಾಗ್ಯಗಳಿಂದ ಒಡಮೂಡುವ ಆತ್ಮವಿದ್ಯೆ ಕೂಡಾ ಆಳವಾದ, ಸೂಕ್ಷ್ಮವಾದ ಸಂಶೋಧನೆ ಹಾಗೂ ಪರಿಷ್ಕರಣೆಗಳಿಗೆ ಒಳಪಟ್ಟಿದೆ. ಚರ್ಚೆಗಳು ಶತಮಾನಗಳ ಕಾಲ ನಡೆದು, ಖಂಡನ–ಮಂಡನಗಳೊಂದಿಗೆ ಪೂರ್ವ ಪಕ್ಷ–ಉತ್ತರ ಪಕ್ಷಗಳೊಂದಿಗೆ, ಸೂಕ್ಷ್ಮಾತಿಸೂಕ್ಷ್ಮವಾಗಿ ನಡೆದಿವೆ. ಸಿದ್ಧಾಂತಗಳು ಸ್ಥಾಪನೆಯಾಗಿವೆ. ಮಾನವನ

ಬೌದ್ಧಿಕ ಹಾಗೂ ವೈಚಾರಿಕಪಾರಮ್ಯಕ್ಕೆ ಸಾಕ್ಷಿಯಾಗಿವೆ, ವಿಶಾಲವಾದ ಉಪನಿಷತ್‌ಪರಂಪರೆ, ವಿವಿಧ ದರ್ಶನ ಶಾಸ್ತ್ರಗಳು. ಇವು ಕೇವಲ ಪ್ರಜ್ಞಾಪ್ರಧಾನವಲ್ಲ, ಜಟಿಲತರ್ಕದ ಪ್ರದರ್ಶನವಲ್ಲ. ಆದರೆ ಇವುಗಳ ಅವಲಂಬನೆಯಿಂದ ಉಪಯೋಗ/ ಪ್ರಯೋಜನ ಪಡೆದುಕೊಂಡು ಬುದ್ಧಿಶಕ್ತಿಗೆ ಹಾಗೂ ಇಂದ್ರಿಯಗ್ರಾಹ್ಯತ್ವಕ್ಕೆ ಮೀರಿದ, ಅತೀತಸತ್ಯದ ಅನುಭವ ಗಳಿಸುವುದೇ ನಿಜವಾದ ಆಧ್ಯಾತ್ಮ ಚಿಂತನೆಯ ಗುರಿಯಾಗಿದೆ. ಈ ಕಾರಣದಿಂದ ವೈದಿಕಯುಗದ ಋಷಿಗಳಿಂದ ಆರಂಭಿಸಿ, ಉಪನಿಷತ್ಕಾರರು, ದಾರ್ಶನಿಕರು, ಹಾಗೂ ಅನೇಕ ಸಂತ -ಪಂಥ-ಪರಂಪರೆಗಳು ಕೇವಲ ಶುಷ್ಕತರ್ಕದ ಚಟುವಟಿಕೆಯಾಗಿ ಉಳಿಯಲಿಲ್ಲ. ಬದಲಾಗಿ ಆಯಾಯಾ ಸಾಧಕನ ಸಾಧನೆಯ ಮಟ್ಟಕ್ಕೆ ಅನುಸಾರವಾದ ಸಾಕ್ಷಾದನುಭವದ ಅತಿಸೂಕ್ಷ್ಮ ಚಿತ್ರಣಗಳಾದವು. ಭಾರತೀಯಇತಿಹಾಸದ ಸಹಸ್ರಾರು ವರ್ಷಗಳಲ್ಲಿ. ಪ್ರತಿಯೊಬ್ಬ ಅಧ್ಯಾತ್ಮಚಿಂತಕ, ಸಾಧಕನು ಮನುಷ್ಯನ ಇತಿ-ಮಿತಿ-ದೌರ್ಬಲ್ಯಗಳನ್ನು ಮೀರಬೇಕಾದ ಅಗತ್ಯವನ್ನು ಹೇಳಿದ್ದಲ್ಲದೆ ಮಾಡಿ ತೋರಿಸಿದ್ದಾನೆ. ಅಷ್ಟಲ್ಲದೆ ದೇವತ್ವದ-ಪರಮಾತ್ಮಾನುಭವದ ಶಾಂತಿ, ಸ್ಥೈರ್ಯ,ಧೈರ್ಯ, ವೈಶಾಲ್ಯ, ಔದಾರ್ಯಗಳನ್ನು, ಜೀವದಯೆಯನ್ನು ಸಂಪಾದಿಸಿ ಗೆದ್ದಿದ್ದಾನೆ. ಆತ್ಯಂತಿಕವಾದ ಸತ್ಯತತ್ತ್ವದ ಅನ್ವೇಷಣೆಯಲ್ಲಿ ಯಶಸ್ವಿಯಾಗಿ ಜ್ಞಾನಿಯೂ ಅನುಭಾವಿಯೂ ಆಗಿದ್ದಾನೆ. ತನ್ನ ಪ್ರಯತ್ನದ ಫಲಗಳು ಲೋಕಕ್ಕೆಲ್ಲ ದೊರೆಯಲಿ ಎಂಬ ಉದಾರತೆಯಿಂದ, ಕರುಣೆಯಿಂದ, ಸತ್ಸಂಕಲ್ಪದಿಂದ ಸಾಧನ-ಜ್ಞಾನ-ಅನುಭವಗಳ ಮಾರ್ಗವನ್ನು ಉಪದೇಶಿಸಿದ್ದಾನೆ.

ವೇದ-ಪುರಾಣಗಳಲ್ಲಿ ಕಾಣುವ ಅನೇಕ ಋಷಿಮುನಿಗಳು, ಸಾಂಖ್ಯ-ಯೋಗ ಮುಂತಾದ ದರ್ಶನ ಶಾಸ್ತ್ರಗಳ ಗೌತಮ-ಕಣಾದ- ಕಪಿಲ-ಪತಂಜಲಿ ಇತ್ಯಾದಿ ಶಾಸ್ತ್ರಕಾರರು, ಪರಿವ್ರಾಜಕರಾಗಿ ಊರೂರು ಅಲೆಯುತ್ತಾ ತತ್ತ್ವಜ್ಞಾನ ಪಸರಿಸಿದ ಆಚಾರ್ಯರು, ಪಂಡಿತರು ಪಾಮರರು ಎಂಬ ಭೇದವಿಲ್ಲದೆ ಹೊಟ್ಟೆ-ಬಟ್ಟೆಯ ಜಂಜಾಟದಲ್ಲಿ ಮುಳುಗಿದ್ದ ಜನಸಾಮಾನ್ಯರನ್ನು ಸೆಳೆದು ಭಕ್ತಿಯೆಡೆಗೆ ಅರಿವಿನೆಡೆಗೆ ಪ್ರೇರಿಸಿದ ಸಂತಜನರು, ಸಾಧಕರು, ಶರಣರು, ದಾಸರು, ಸೂಫಿಗಳು, ಅವರ ವಿವಿಧ ಸಂಪ್ರದಾಯಗಳು ಹೀಗೆ ಅಧ್ಯಾತ್ಮದ ಮಹಾವೃಕ್ಷವೇ ನಮ್ಮ ದೇಶದಲ್ಲಿ ಬೆಳೆದು ನಿಂತಿದೆ.

ಅಧ್ಯಾತ್ಮವು ಮನೋಬುದ್ಧಿಗಳ ಚಮತ್ಕಾರವಾಗಿಯೋ, ತರ್ಕದ ಗೋಪುರವಾಗಿಯೋ ಮಹಾನ್ ಶಬ್ದಾರಣ್ಯವಾಗಿಯೋ ನಿಲ್ಲದೆ, ಇಂದ್ರಿಯಾತೀತವಾದ, ಮನೋವಾಕ್ಕುಗಳಿಂದ ಸ್ಫುಟವಾಗಿ ವಿವರಿಸಲಾಗದ, ಅನುಭವೈಕವೇದ್ಯವಾದ 'ನೆಲೆ'ಯಾಗಿ ನಿಂತಾಗ ಸಾಧಕನು 'ಜ್ಞಾನಿ' 'ಅವಧೂತ'[2] ಎನಿಸುತ್ತಾನೆ. ಆಗ ಲೋಕದ ವರ್ಣಾಶ್ರಮಾದಿ ಸಕಲಆಚಾರಗಳನ್ನು, ಜಾತಿಸಂಪ್ರದಾಯ ಭೇದಗಳನ್ನು

ಮೀರಿದ ಉನ್ನತಸ್ಥಿತಿಯಲ್ಲಿದ್ದರೂ ಸಾಮಾಜಿಕರನ್ನು ಕಡೆಗಣಿಸದೆ ಅವರ ನಡುವೆ ಇದ್ದುಕೊಂಡು, ಸುಖದು:ಖಗಳಿಗೆ ಪ್ರತಿಕ್ರಿಯೆ ನೀಡಿದರೂ ನಿರ್ಲಿಪ್ತತೆಯನ್ನು ಕಾಪಾಡಿಕೊಂಡು ಇರುತ್ತಾನೆ. ಜನಸಾಮಾನ್ಯರನ್ನು ಅನುಕಂಪದಿಂದ ಕಾಣುತ್ತ ಉದ್ಧರಿಸಬೇಕೆಂಬ ಹಂಬಲವನ್ನಿಟ್ಟುಕೊಂಡು ತನ್ನ ತಿಳುವಳಿಕೆಯನ್ನು ಹರಡುತ್ತಾನೆ. ತಾನಿರುವ ದೇಶಕಾಲಗಳನ್ನು ಪಾವನ ಗೊಳಿಸುತ್ತಾನೆ. ಅನುಯಾಯಿಗಳಾದ ಜನರನ್ನು ಧನ್ಯಗೊಳಿಸುತ್ತಾನೆ.

## ೧.೨ ಧಾರ್ಮಿಕ, ಆಧ್ಯಾತ್ಮಿಕ ಬೆಳವಣಿಗೆಯ ಹಾದಿಯ ಪಕ್ಷಿನೋಟ:

ಭಾರತದ ಸಮಗ್ರ ಧಾರ್ಮಿಕ ಹಾಗೂ ಅಧ್ಯಾತ್ಮಿಕ ಇತಿಹಾಸವನ್ನು ಈಕ್ಷಿಸಿದಾಗ ಅನೇಕ ಸ್ಥಿತ್ಯಂತರಗಳು, ವಿಭಿನ್ನ ಮತಪಂಥಗಳ ಸಂವಾದ, ಸಂಘರ್ಷಗಳು ಕಾಣಿಸುತ್ತವೆ. ಐಹಿಕ ಸುಖಸಂಪತ್ತಿಗಾಗಿ, ದೀರ್ಘ ಜೀವಿತಕ್ಕಾಗಿ, ಬಲವರ್ಧನೆಗಾಗಿ ಯಜ್ಞಗಳನ್ನು ನಡೆಸಿ ಫಲವನ್ನು ಪಡೆವ ಕಾಲವೊಂದಿತ್ತು. ಸ್ವರ್ಗಕಾಮೋ ಯಜೇತ, ಪುತ್ರಕಾಮೋ ಯಜೇತ, ಅನ್ನಕಾಮೋ ಯಜೇತ ಮುಂತಾದ ವಚನಗಳು ಮನುಷ್ಯಜೀವನದ ಯಶಸ್ಸಿನ, ಸಂತೃಪ್ತಿಯ ಸ್ವರೂಪವನ್ನು ಕಂಡುಕೊಂಡ ವೇದಕಾಲದ ಜನರ ಮನಃಪ್ರವೃತ್ತಿಯನ್ನು ತಿಳಿಸುತ್ತವೆ. ನೂರಾರು ಸೂಕ್ತಗಳು, ದೇವತೆಗಳು, ಯಜ್ಞವಿಧಿಗಳು ಇವೆಲ್ಲವನ್ನು ಪರಿಶೀಲಿಸುವಾಗ, ತನ್ನನ್ನು ಮೀರಿದ ಹಾಗೂ ಜಗತ್ತಿನ ಆಗು ಹೋಗುಗಳಿಗೆ ಕಾರಣವಾದ ಶಕ್ತಿಗಳಿವೆ, ಅವುಗಳ ಉಪಾಸನೆಯಿಂದ ಇಷ್ಟಾರ್ಥವನ್ನು ಪಡೆಯಬಹುದು ಎಂಬ ವೈದಿಕ ಋಷಿಯ ಚಿಂತನೆಯನ್ನು ಗುರುತಿಸಬಹುದು. ಪರಮಶಕ್ತಿಯ ಬಗ್ಗೆ, ಅದರ ಪ್ರಭಾವ-ಪ್ರಭುತ್ವಗಳ ಬಗ್ಗೆ ಇರುವ ಅಚ್ಚರಿ, ಮೆಚ್ಚುಗೆ, ಭಯ, ಭಕ್ತಿಗಳನ್ನು ಕಾಣಬಹುದು. ಆದರೆ ಈ ಚಿಂತನಾಸ್ರೋತದೊಂದಿಗೆ, ಇದರಿಂದ ಭಿನ್ನವಾದ ವೈಚಾರಿಕ ಹಾಗೂ ಜಿಜ್ಞಾಸು ಪ್ರವೃತ್ತಿಗಳೂ ಮೂಡಿದ್ದನ್ನು ಋಕ್ಸಂಹಿತೆಯಲ್ಲೇ ಉಲ್ಲೇಖಿಸಲಾಗಿದೆ. ನಾಸದೀಯ ಸೂಕ್ತ, ಹಿರಣ್ಯ ಗರ್ಭ ಸೂಕ್ತಗಳೇ ಅದಕ್ಕೆ ಪ್ರಮಾಣ. ಸಂಹಿತಾ-ಬ್ರಾಹ್ಮಣ ಗ್ರಂಥಗಳು ಯಜ್ಞದ ಪ್ರಾಧಾನ್ಯವನ್ನೇ ಪ್ರಮುಖವಾಗಿ ತಿಳಿಸುತ್ತವೆ. ಆರಣ್ಯಕ-ಉಪನಿಷತ್ತುಗಳು ಕರ್ಮಮಾರ್ಗವನ್ನು ಅಷ್ಟಾಗಿ ವಿವರಿಸದೆ, ಜ್ಞಾನದ ಮೀಮಾಂಸೆಯನ್ನು ಸ್ಥಾಪಿಸುತ್ತವೆ. **ಅಮೃತತ್ವಸ್ಯ ನ ಆಶಾ ಅಸ್ತಿ ವಿತ್ತೇನ**[1] (ಸಂಪತ್ತಿನಿಂದ ಅಮೃತತ್ವವನ್ನು ಆಶಿಸಲಾಗದು). **ನ ವಿತ್ತೇನ ತರ್ಪಣೀಯೋ ಮನುಷ್ಯ:**[2] (ಐಶ್ವರ್ಯದಿಂದ ನರನಿಗೆ ತೃಪ್ತಿ ದೊರೆಯದು) **ತ್ಯಾಗೇನೈಕೇ ಅಮೃತತ್ವಮಾನಶು:**[3] (ತ್ಯಾಗದಿಂದ ಮಾತ್ರವೇ ಅಮೃತ ಲಾಭ) ಇತ್ಯಾದಿ ಉಪನಿಷದ್ವಾಕ್ಯಗಳು ಕ್ಷಣಿಕಸುಖದ, ಸಂಪತ್ತಿನ ಸ್ಥಾನವನ್ನು ತಿಳಿಸುತ್ತವೆ. ಮುಂದಿನ ಶತಮಾನಗಳಲ್ಲಿ ಹುಟ್ಟಿಕೊಂಡ ಭಕ್ತಿಯ, ಯೋಗದ, ಕರ್ಮದ, ಜ್ಞಾನದ ಪಂಥಗಳ ಬೇರುಗಳು ವೇದಗಳಲ್ಲೆ ಅಡಗಿವೆ. ವೈದಿಕ ಸಾಹಿತ್ಯವನ್ನೇ ಕರ್ಮಕಾಂಡ, ಜ್ಞಾನಕಾಂಡ ಎಂಬುದಾಗಿ ವಿಭಾಗಿಸಿ, ವೇದಪುರುಷನನ್ನು ಕರ್ಮಬ್ರಹ್ಮಸ್ವರೂಪಿ ಎಂದು ಕರೆಯುವ ಮೂಲಕ ವೈದಿಕರು ಕರ್ಮನಿಷ್ಠ

ಹಾಗೂ ಜ್ಞಾನನಿಷ್ಠಮಾರ್ಗಗಳನ್ನು ಅಂಗೀಕರಿಸಿದ್ದನ್ನು ತಿಳಿಯುತ್ತೇವೆ. ಸಂಘರ್ಷಕ್ಕಿಳಿಯದೆ ಸಮನ್ವಯತೆಯ ಹಾದಿಯತ್ತ ಒಲವು ತೋರಿದ್ದನ್ನು ಕಾಣುತ್ತೇವೆ. ಬೌದ್ಧ-ಜೈನ ಪಂಥಗಳು ವೇದದ ಕರ್ಮಠವಾದ ಯಜ್ಞಸಂಪ್ರದಾಯವನ್ನು ವಿರೋಧಿಸಿ, ತ್ಯಾಗದ, ಅರಿವಿನ ಪ್ರಾಧಾನ್ಯವನ್ನು ಕಂಡುಕೊಂಡು, ಸ್ವತಂತ್ರ ಚಿಂತನೆಯನ್ನು ಆರಂಭಿಸಿದವು. ಕರ್ಮಜಟಿಲತೆಯ ಬದಲಾಗಿ ಸರಲ ತತ್ತ್ವಗಳನ್ನು ಉಪದೇಶಿಸಿದ್ದರಿಂದ ಸರ್ವಜನಪ್ರಿಯವಾದವು. ಅವುಗಳ ಪ್ರಭಾವ ಹೆಚ್ಚುತ್ತಿದ್ದಂತೆ ವೈದಿಕಪರಂಪರೆ ಕ್ಷೀಣಿಸಿತು. ಬೌದ್ಧ-ಜೈನ ಪರಂಪರೆಗಳು ಕೂಡಾ ಆಂತರಿಕ ಮತ್ತು ಬಾಹ್ಯ ಕಾರಣಗಳಿಂದ ಕಾಲಾಂತರದಲ್ಲಿ ಕ್ಷೀಣವಾದವು. ಮುಂದೆ ಯೌಗಿಕ, ತಾಂತ್ರಿಕ, ವಿರಕ್ತ ಸಂಪ್ರದಾಯಗಳು, ಶೈವ-ವೈಷ್ಣವ ಮತಗಳು, ಗುರುಗಳು ಹುಟ್ಟಿಕೊಂಡು ವೈವಿಧ್ಯಮಯ ಬೆಳವಣಿಗೆಗೆ ಕಾರಣವಾಗುತ್ತವೆ. ಗ್ರೀಕರು - ಹೂಣರು ಈ ದೇಶವನ್ನು ಆಕ್ರಮಿಸಿದಾಗ, ರಾಜಕೀಯ ವಿಪ್ಲವವನ್ನು ತಾಳಿಕೊಂಡು ಆಯಾ ರಾಜರನ್ನೇ ತಮ್ಮ ಅನುಯಾಯಿಗಳನ್ನಾಗಿ ಮಾಡಿಕೊಳ್ಳುವಷ್ಟು ಈ ಪಂಥಗಳು ಪ್ರಬಲವಾಗಿದ್ದವು. ಭಾರತಕ್ಕೆ ಬಂದ ಗ್ರೀಕ್ ರಾಜನೊಬ್ಬ ಭಾಗವತ ಸಂಪ್ರದಾಯದ ಶಿಷ್ಯನಾಗಿ ವಾಸುದೇವೋಪಾಸಕನಾಗುತ್ತಾನೆ ಹೂಣರಾಜ ಮಿಹಿರಕುಲನು ಶಂಕರನ ಭಕ್ತನಾಗಿ ತಾನು ಟಂಕಿಸಿದ ನಾಣ್ಯಗಳಲ್ಲಿ **'ಜಯತು ವೃಷ:'** ಎಂದು ಬರೆಸುತ್ತಾರೆ.[೬] ಇಷ್ಟು ಬಲಶಾಲಿಯಾಗಿದ್ದ ಭಾರತೀಯಧಾರ್ಮಿಕನಾಯಕತ್ವ ಮುಸಲ್ಮಾನರ ದಾಳಿಯ ಕಾಲಕ್ಕೆ ದುರ್ಬಲವಾಗಿತ್ತು. ಜನ ಸಮುದಾಯದ ಶಕ್ತಿಯನ್ನು ಜಾಗೃತಗೊಳಿಸಲು, ಜನಮನಕ್ಕೆ ಸಂಸ್ಕಾರವಿತ್ತು, ಜಾತಿ ಧರ್ಮದ ಕಟ್ಟುಪಾಡು ಸಡಿಲಿಸುವ ಅಗತ್ಯ ಬಿತ್ತು.ಆಗ ಆರಂಭವಾದುದೇ ಮತ್ಸ್ಯೇಂದ್ರನಾಥ, ಗೋರಖ್‌ನಾಥರ 'ಸಿದ್ಧ-ನಾಥ' ಸಂಪ್ರದಾಯ. ಬಹುಜನಸಮಾಜದ ಹತ್ತಿರಕ್ಕೆ ಹೋಗಿ, ಅವರೊಡನೆ ಬೆರೆತು, ಸಿದ್ಧರು ಯೋಗಿಗಳು ಆಯಾ ಪ್ರಾದೇಶಿಕಭಾಷೆಯಲ್ಲಿ ಧರ್ಮಬೋಧನೆಗೆ ತೊಡಗಿದರು. ನಾಥಪಂಥದ ಪ್ರಭಾವದಿಂದ ಮಹಾನುಭಾವರು, ಸಂತರು, ವೀರಶೈವರು ಸ್ಫೂರ್ತಿ ಪಡೆದರು. ಇಂದಿಗೂ ವೀರಶೈವರ ನಡೆವಳಿ-ನುಡಿವಳಿಗಳಲ್ಲಿ ನಾಥರ ಸಾಹಚರ್ಯವನ್ನು ಕಾಣಬಹುದು.[೭]

**೧.೩ ಇಸ್ಲಾಂ-ಸೂಫಿಗಳ ಪ್ರವೇಶ ಹಾಗೂ ಪ್ರಭಾವಗಳು.**

ಇನ್ನೊಂದೆಡೆ ಮುಸಲ್ಮಾನ ಆಕ್ರಮಣಕಾರಿಗಳೊಡನೆ ಸೂಪಿಪಂಥ ಭಾರತದಲ್ಲಿ ಕಾಲಿಟ್ಟಿತು.

ಇದು ಇಸ್ಲಾಂಪೂರ್ವಯುಗದಲ್ಲೇ ಜನಿಸಿದ ಪಂಥ. ಇಸ್ಲಾಂ ಆವಿರ್ಭಾವವಾಗುವ ಮೊದಲಿಗೆಯೇ ಮಧ್ಯಏಷಿಯಾದಲ್ಲಿ ಹುಟ್ಟಿದ ಸೂಫಿತತ್ತ್ವಜ್ಞಾನ ಪ್ಲೇಟೋ ಎಂಬ ಗ್ರೀಕ್ ತತ್ತ್ವಜ್ಞನಿಂದ, ಕ್ರೈಸ್ತ ಸುವಾರ್ತೆಗಳಿಂದ, ಪರ್ಷಿಯಾದ ಝೂರತುಷ್ಟ್ರನಿಂದ ಚಿಂತನೆಗಳನ್ನು ಸ್ವೀಕರಿಸಿತ್ತು. ಇಸ್ಲಾಂ ಉದಯವಾದ ಮೇಲೆ ಅದರ ತತ್ತ್ವವೂ ಸೇರಿಕೊಂಡಿತು. ಆದರೆ ಸೂಫಿ ತತ್ತ್ವದ ಚಿಲುಮೆಯ

ಗರ್ಭಕ್ಕೆ ಅಂತರ್ಜಲ ಒದಗಿಸಿದ್ದು ಭಾರತ. 'ಆದಿಕಾಲದ ಸೂಫಿಗಳು ಬೌದ್ಧ ಸಿದ್ಧರ, ನಾಥ ಪಂಥೀಯರ ಸಂಪರ್ಕ ಹೊಂದಿದ್ದರು. /ಪರ್ಶಿಯಾದಿಂದ ಸೂಫಿಗಳು ಗುರುವನ್ನು ಜ್ಞಾನವನ್ನು ಹುಡುಕುತ್ತಾ ಭಾರತಯಾತ್ರೆ, ಭಾರತದರ್ಶನ ಮಾಡುತ್ತಿದ್ದರು. 'ಹಲ್ಲಾಜ' ಎಂಬ ಸೂಫಿ ತತ್ತ್ವಜ್ಞನಿಗೆ ಅದ್ವೈತದ ಪ್ರೇರಣೆಯಾದುದು ಭಾರತದಲ್ಲಿಯೇ. ಹಲವು ನದಿಗಳ ನೀರು ಪಡೆದ ಮಹಾನದಿಯಾಯಿತು ಸೂಫಿವಾದ.[೮]

ಭಾರತವನ್ನು ಪ್ರವೇಶಿಸಿದ ಸೂಫಿಗಳಿಗೆ ತಾತ್ತ್ವಿಕಸಾಹಚರ್ಯದಿಂದ ಈ ದೇಶ ಅಪರಿಚಿತವಾಗಲಿಲ್ಲ. ಯೋಗಸಾಧಕರಿಗೆ, ಭಕ್ತಿಪಂಥೀಯರಿಗೆ ಸೂಫಿಗಳು ಪರಕೀಯರೆನಿಸಲಿಲ್ಲ. ಮುಸಲ್ಮಾನರ ಆಕ್ರಮಣ ಹಾಗೂ ಅಧಿಕಾರ ಪ್ರಾಪ್ತಿಯಿಂದ ರಾಜಕೀಯ –ಸಾಮಾಜಿಕ ಸಂಘರ್ಷ ತಲೆದೋರಿತು. ಆದರೆ ಆಧ್ಯಾತ್ಮಿಕಪ್ರವೃತ್ತಿಯ ಜನರಲ್ಲಿ ಸಾಮರಸ್ಯ ಉಳಿದಿತ್ತು[೯]. ವಿಶೇಷವಾಗಿ ನಾಥಪಂಥೀಯರು ನಿರಾಕಾರವಾದಿಗಳಾದ್ದರಿಂದ ಸೂಫಿಗಳೊಡನೆ 'ಕೊಡು–ಕೊಳುವ ಸಂಬಂಧ, ಸಂವಾದ ಸುಲಭಸಾಧ್ಯವಾಯಿತು. ನಿರಂತರವಾಗಿ ಶತಮಾನಗಳ ಅವಧಿಯಲ್ಲಿ ನಡೆದ ನಾಥ –ಸಿದ್ಧ –ಮಹಾನುಭಾವ, ಸೂಫಿಗಳ ತಾತ್ತ್ವಿಕ ಆದಾನ– ಪ್ರದಾನಗಳು ನಾಮ, ರೂಪ, ಆಚರಣೆಗಳಲ್ಲಿ ಸಂಕರವನ್ನು ಉಂಟು ಮಾಡಿದವು. ಹಾಗಾಗಿ ಸಹಜವಾಗಿಯೇ ಈ ಸಂತರು ಮೂಲನಾಮವನ್ನು, ಅದಕ್ಕಂಟಿದ ಜಾತಿವಾಸನೆಯನ್ನು ಕಳೆದುಕೊಂಡರು. ತಮ್ಮ ಅನುಯಾಯಿಗಳಿಗೆ ಬೇಕಿದ್ದ ಹೆಸರಿನಿಂದ ಪ್ರಸಿದ್ಧರಾದರು. ಚಾಂಗದೇವ–ಚಾಂಗ ಪೀರ, ಬಂದೇನವಾಜ–ಕೇಶವ ಚೈತನ್ಯ, ಚಿಸ್ತಿ ಸೂಫಿ ನಾಸಿರುದ್ದೀನ್– ನಾಗನಾಥ ಇತ್ಯಾದಿ.

ಅನೇಕ ಆಸೆ–ಆಕಾಂಕ್ಷೆಗಳನ್ನು ಹೊಂದಿದ ಮತ್ತು ಕಷ್ಟಕೋಟಲೆಗಳಿಂದ ಬಳಲಿದ ಸಾಮಾನ್ಯ ಜನರು ಕೇವಲ ತಮ್ಮ ಇಷ್ಟಗಳ ಪ್ರಾಪ್ತಿ ಮತ್ತು ಅನಿಷ್ಟಗಳ ಪರಿಹಾರವನ್ನಷ್ಟೇ ಬಯಸುತ್ತಾರೆ. ಅವುಗಳನ್ನು ಆಗ ಮಾಡುವ ಸಂತನ ಮಹಿಮೆ–ಪ್ರಭಾವಗಳನ್ನು ಪೂಜಿಸುತ್ತಾರೆ. ತಮ್ಮ ಶಾಂತಿ–ನೆಮ್ಮದಿಗಳಿಗೆ ಕಾರಣನಾದ ಸಂತ, ಯಾವ ಪರಂಪರೆಗೇ ಸೇರಿರಲಿ, ಶ್ರದ್ಧೆಯಿಂದ ಭಕ್ತಿಯಿಂದ ನಂಬುತ್ತಾರೆ. ಆ ನಂಬುಗೆಯೇ ವಿಭಿನ್ನ ಸಂಪ್ರದಾಯವಾಗಿ ಬೆಳೆಯುತ್ತದೆ.

### ೧.೪ **ಅಧ್ಯಾತ್ಮ ಸಾಧಕ – ಅನುಭಾವಿ ಸಂತಶಿಶುನಾಳಶರೀಫರು**

ಸಮೃದ್ಧವಾದ ಭಾರತೀಯತತ್ತ್ವಜ್ಞಾನೀಪರಂಪರೆಯಲ್ಲಿ ಋಷಿ, ಮುನಿ, ಯೋಗಿ, ತ್ಯಾಗಿ, ಜೀವನ್ಮುಕ್ತ ಮುಂತಾದ ವೈವಿಧ್ಯಮಯ ಅಧ್ಯಾತ್ಮಮಾರ್ಗಿಗಳಲ್ಲಿ **'ಕರ್ನಾಟಕದ ಕಬೀರ'** ಎಂದು ಸುಪ್ರಸಿದ್ಧರಾದ ಶಿಶುನಾಳದ ಮಹಮ್ಮದ್ ಶರೀಫ್ ಸಾಹೇಬರು ವಿಶಿಷ್ಟವಾದ ಸ್ಥಾನ ಪಡೆದಿದ್ದಾರೆ.

**"ನಾಹಂ ಕರ್ತಾ, ನಾಹಂ ಕಾರಯಿತಾ"**[10] ಮಾಡುವವ ನಾನಲ್ಲ, ಮಾಡಿಸುವವನೂ ನಾನಲ್ಲ ಎಂಬ ಉಪನಿಷದ್ವಚನದಂತೆ, ಅಹಂಕಾರತ್ಯಾಗದ ಕುರುಹಾಗಿ ಋಷಿಗಳು–ಕವಿಗಳು ಶಾಸ್ತ್ರಜ್ಞರು ಅತ್ಯುತ್ಕೃಷ್ಟಸಾಧನೆಗಳನ್ನು ಮಾಡಿದ್ದರೂ, ಕೃತಿಗಳನ್ನು ರಚಿಸಿದ್ದರೂ ತಮ್ಮ ಬಗ್ಗೆ ಹೇಳಿಕೊಂಡುದು ಇಲ್ಲವೇ ಇಲ್ಲ. ತಮ್ಮ ದೇಶ–ಕಾಲಗಳ ಬಗ್ಗೆ ವಿವರಿಸುವುದು ಅವಶ್ಯಕವೆಂದು ಭಾವಿಸಿರಲಿಲ್ಲ. ಅದೇ ಮಾದರಿಯಲ್ಲಿ ಸಂತ ಶರೀಫರ ಜೀವನ ವಿವರಗಳೂ ಅಸ್ಪಷ್ಟ. ಆದ್ದರಿಂದ ಹೆಚ್ಚಿನ ಶೋಧನೆಯನ್ನು ಅಪೇಕ್ಷಿಸುತ್ತವೆ.

**ಶರೀಫರ ಸಂಕ್ಷಿಪ್ತ ಜೀವನ ವೃತ್ತಾಂತ:**

ಧಾರವಾಡಜಿಲ್ಲೆಯ ಶಿಗ್ಗಾವಿತಾಲೂಕಿನ ಶಿಶುನಾಳಗ್ರಾಮ. ಅಲ್ಲಿ ದೇವಕಾರ ಮನೆತನದ ಇಮಾಂ ಹಜರತ್ ಸಾಹೇಬ ಹಾಗೂ ಅವರ ಪತ್ನಿ ಹಜ್ಜೂಮಾ ವಾಸ ಮಾಡಿದ್ದರು. ಇಮಾಮರು ಹಿಂದುಗಳ ಮಂತ್ರ, ತಂತ್ರ, ಜ್ಯೋತಿಷ, ಪುರಾಣಗಳ ಪರಿಚಯ ಇದ್ದವರು. ದಂಪತಿಗಳು ಸಂತಾನಕ್ಕಾಗಿ ಹಂಬಲಿಸುತ್ತ ಹುಲಗೂರಿನ ಸಂತಖಾದರ್ ಷಾವಲಿ ಅವರ ಸಮಾಧಿಗೆ ಭಕ್ತಿಯಿಂದ ನಡೆದುಕೊಳ್ಳುತ್ತಾರೆ. ೧೮೧೯ನೇ ಇಸವಿ ಮಾರ್ಚ್ ಏಳನೆಯ ದಿನಾಂಕ ಗಂಡು ಮಗು ಜನಿಸುತ್ತದೆ. ಮಹಮ್ಮದ ಶರೀಫ ಎಂಬ ಹೆಸರು ಪಡೆದ ಮಗ ಕೂಲಿಮಠದಲ್ಲಿ ವಿದ್ಯಾರಂಭ ಮಾಡಿ ಮುಲ್ಕಿ ಪರೀಕ್ಷೆಯಲ್ಲಿ ಉತ್ತೀರ್ಣನಾಗುತ್ತಾನೆ. ಆಮೇಲೆ ಶರೀಫರು ಸುತ್ತಮುತ್ತಲ ಊರುಗಳಲ್ಲಿ ಶಿಕ್ಷಕರಾಗಿ ದುಡಿಯುತ್ತಾರೆ. ಉರ್ದು, ಮರಾಠಿ ಭಾಷೆ ಕಲಿಯುತ್ತಾರೆ. ಬಾಲ್ಯದಿಂದಲೇ ರಾಮಾಯಣ–ಮಹಾಭಾರತ–ದೇವೀ ಪುರಾಣಗಳನ್ನು ಓದಿ ತಿಳಿದುಕೊಳ್ಳುತ್ತಾರೆ. ಪ್ರಭುಲಿಂಗಲೀಲೆಯನ್ನು ಓದಿ ಪ್ರಭಾವಿತರಾಗುತ್ತಾರೆ. ಊರಲ್ಲಿ ನಡೆವ ಹಬ್ಬ, ಜಾತ್ರೆ, ಬಯಲಾಟಗಳಲ್ಲಿ ವೇಷ ಹಾಕಿ ಕುಣಿಯುವುದು, ಸರ್ವಜ್ಞರ, ಸರ್ಪಭೂಷಣ ಶಿವಯೋಗಿಗಳ ಕಾವ್ಯವಾಚನ ಮಾಡುವುದು,. ಶಾಸ್ತ್ರ – ಪುರಾಣಪ್ರವಚನಗಳನ್ನು ಶ್ರದ್ಧೆಗೌರವಗಳಿಂದ ಶ್ರವಣ ಮಾಡುವುದು, 'ರಿವಾಯತ್ ಪದ'ಗಳನ್ನು ರಚಿಸಿ ಮುಹರಂಮೆರವಣಿಗೆಯಲ್ಲಿ ಹೆಜ್ಜೆಮೇಳ ಕುಣಿಸುವುದು, ಹೀಗೆಲ್ಲ ಚಟುವಟಿಕೆಗಳಿಂದ ಜನಪ್ರಿಯತೆ ಗಳಿಸಿದ್ದರು. ಮತ–ಪಂಥಗಳ ಭೇದವಿಲ್ಲದೆ ಎಲ್ಲರಿಗೂ ಬೇಕಾದವರಾಗಿದ್ದರು. ಆದರೆ ಬೇರೇನನ್ನೋ ಸಾಧಿಸಬೇಕಾದ ಶರೀಫರು ಉದ್ಯೋಗ ತ್ಯಜಿಸುತ್ತಾರೆ. ಮಿತ್ರರೊಡನೆ ಆಧ್ಯಾತ್ಮಿಕ ಚರ್ಚೆ ನಡೆಸುತ್ತ ಇದ್ದವರಿಗೆ ಜಿಜ್ಞಾಸೆ ಮೊಳೆಯುತ್ತದೆ. ಕಳಸದ ಗೋವಿಂದಭಟ್ಟರೆಂಬ ಶಾಕ್ತ ಸಂಪ್ರದಾಯದ, ಅದ್ವೈತತತ್ತ್ವಜ್ಞನಾದ ಸ್ಮಾರ್ತಬ್ರಾಹ್ಮಣನನ್ನು ಗುರುವಾಗಿ ಪಡೆಯುತ್ತಾರೆ. ಯೋಗ ಸಾಧಕರಾದ, ಸಿದ್ಧಪುರುಷರಾದ ಅವಧೂತಲಕ್ಷಣಗಳಿರುವ ಗುರುವಿನಿಂದ ಯೋಗ್ಯ ಉಪದೇಶ, ಮಾರ್ಗದರ್ಶನಗಳು ಲಭಿಸುತ್ತವೆ. ಗುರುವಿನ ಗುಲಾಮನಂತೆ ಅನುವರ್ತಿಸಿದ ಶರೀಫರು ಜ್ಞಾನ–

ವೈರಾಗ್ಯ ಸಂಪನ್ನರಾಗುತ್ತಾರೆ. ಮಾತಾಪಿತೃಗಳ ಒತ್ತಾಯದಿಂದ, ಗುರುವಿನ ಆದೇಶದಿಂದ ವಿವಾಹ ಮಾಡಿಕೊಂಡು ಮಗಳೊಬ್ಬಳನ್ನು ಪಡೆಯುತ್ತಾರೆ. ವಿಧಿವಶಾತ್ ಅವರಿಬ್ಬರೂ ತೀರಿಕೊಂಡಾಗ ಶರೀಫರಿಗೆ ಸಂಸಾರದಿಂದ ಮೊದಲ ಬಿಡುಗಡೆ ದೊರೆತಂತಾಗಿ ಅವರು ಸ್ವತಂತ್ರರಾಗುತ್ತಾರೆ. ಲೋಕಾಸಕ್ತಿ ಹಿಂಜರಿದು ಪಾರಮಾರ್ಥಿಕ ಚಿಂತನೆ ಬಲವಾಗಿ ಮುಂದಾಗುತ್ತದೆ. ಗುರುಗೋವಿಂದ ಭಟ್ಟರೂ ಕಾಲವಾದ ಮೇಲೆ ಪರಮವೈರಾಗ್ಯದಿಂದ ತೀರ್ಥಕ್ಷೇತ್ರಯಾತ್ರೆ ಮಾಡುತ್ತಾರೆ. ಪುಣ್ಯ ಪುರುಷರ ದರ್ಶನ ಪಡೆಯುತ್ತಾರೆ. ವರಕವಿಯಾಗಿ ಮೋಹ–ಮಾಯೆಗಳ ಸ್ವರೂಪವನ್ನು, ಆತ್ಮಜ್ಞಾನದ ಮಹಿಮೆಯನ್ನು ಅರಿತು ಹಾಡುಗಳ ಮೂಲಕ ಜನರಲ್ಲಿ ಪ್ರಚಾರ ಮಾಡಿದರು. ಬಡತನ ಬಾಧಿಸಿದಾಗ ಸಾಲಮಾಡಿ ಅದನ್ನು ತೀರಿಸಲು ಆಸ್ತಿಮಾರಾಟ ಮಾಡಿದರು. ಫಕೀರನಾದ ಶರೀಫರನ್ನು 'ಅನ್ನಕ್ಕೆ ದಂಡ–ಭೂಮಿಗೆ ಭಾರ' ಎಂಬಂತೆ ಪರರು ನಿಂದಿಸಿದಾಗ ತಾಳ್ಮೆಯಿಂದ ಸಹಿಸಿ ಕೊಂಡರು. ಕಾವ್ಯ ರಚಿಸಬೇಕೆಂಬ ಉದ್ದೇಶವಿಲ್ಲದೆ, ಜನರ ಬದುಕಿಗೆ ನೆಮ್ಮದಿ ತರಲು, ಧರ್ಮ ಮಾರ್ಗದಲ್ಲಿ ಬಾಳಿ ಎಲ್ಲರೂ ಭಕ್ತರು, ಮುಕ್ತರು ಆಗಲೆಂದು ಪದ ಹೇಳಿದರು. ತತ್ತ್ವಗಳ ವಿವರಣೆ, ದೇವ– ದೇವಿಯರ ದಂಡಕಸ್ತುತಿ, ಲಾವಣಿ, ಹೋಳಿಪದ, ಮಂಗಳಾರತಿ ಪದ, ರಿವಾಯತ್‌ಹಾಡು ಹೀಗೆ ಬಗೆಬಗೆಯ ರಚನೆಗಳನ್ನು ಮಾಡಿದರು. ಜೀವನದ ನಿತ್ಯದ ಸಾಮಾನ್ಯವಾದ ಘಟನೆಗಳೇ ಅವರಿಗೆ ಪ್ರೇರಕವಾಗಿದ್ದವು. ಸಾಮಾನ್ಯದಲ್ಲಿ ಆರಂಭಿಸಿ ಅಸಾಮಾನ್ಯಕ್ಕೆ, ವ್ಯಾವಹಾರಿಕದಿಂದ ಪಾರಮಾರ್ಥಿಕಕ್ಕೆ ಏರುತ್ತಿದ್ದರು. ಕವಿ ಬೇಂದ್ರೆಯವರ ನುಡಿ[೧೧] ಇಲ್ಲಿ ಸ್ಮರಣೀಯ. 'ಶಿಶುನಾಳ ಶರೀಫಸಾಹೇಬರ ಆತ್ಮವೇಧಕವಾಣಿ ಹಳ್ಳಿಪಳ್ಳಿಯ ಓಣಿಓಣಿಗಳೊಳಗಿನ ಮಾತುಕತೆಗಳನ್ನು ರೂಪಕದ ಅವಯವಗಳನ್ನಾಗಿ ಮಾಡಿ ಆತ್ಮದ ರಂಗು–ರೂಪನ್ನು ನಿರೂಪಿಸುವ ಯೋಗಕುಶಲ ವಾಣಿ'. ಆತ್ಮಜ್ಞಾನಿಗಳಾದ ಶರೀಫರಿಗೆ ದೇಹಾವಸಾನದ ಪೂರ್ವ ಸೂಚನೆ ದೊರೆಯಿತು. ಶರಣ ಸಂಪ್ರದಾಯದಂತೆ 'ವಿಭೂತಿ ವೀಳ್ಯ' ಮಾಡಿಸಿಕೊಂಡು, 'ಜಂಗಮಪಾದ ಪೂಜೆ'ಯನ್ನು ಮಾಡಿ, ಆ ಪಾದಗಳನ್ನು ಶಿರಸಾಧರಿಸಿ ಶಿವಸಾಯುಜ್ಯಮಂತ್ರಪಠನ ಸಾಗುತ್ತಿದ್ದಂತೆ ದೇಹ ಬಿಟ್ಟರು, ಶಿವಯೋಗಿಯಾದರು.

******

## ಟಿಪ್ಪಣಿ

೧. ಉಪನಿಷತ್ ರಹಸ್ಯ : ಪುಟ ೭೮

೨. ಅವಧೂತ : ಯೋ ವಿಲಂಘ್ಯ ಆಶ್ರಮಾನ್ ವರ್ಣಾನ್ ಆತ್ಮನ್ಯೇವ ಸ್ಥಿತಃ ಪುಮಾನ್।
ಅತಿವರ್ಣಾಶ್ರಮೀ ಯೋಗೀ ಅವಧೂತಃ ಸ ಉಚ್ಯತೇ ॥

೩. ಬೃಹದಾರಣ್ಯಕ ಉಪನಿಷತ್ತು : ೨.೪.೨.

೪. ಕಠ ಉಪನಿಷತ್ತು : ೨೭

೫. ಮಹಾನಾರಾಯಣ ಉಪನಿಷತ್ತು : ೧೦.೫

೬. ಶಂಬಾಕೃತಿ ಸಂಪುಟ ೩ : ಪುಟ ೪೯

೭. ಶಂಬಾಕೃತಿ ಸಂಪುಟ ೩ : ಪುಟ ೫೦.೫೧

೮. ಕರ್ನಾಟಕದ ಸೂಫಿಗಳು : ಪುಟ ೨೪

೯. ಮರಾಠಿ ಸಂಸ್ಕೃತಿ – ಶಂಬಾ

೧೦. ಮಹಾನಾರಾಯಣ ಉಪನಿಷತ್ತು

೧೧. ಸಾಹಿತ್ಯ ಮತ್ತು ವಿಮರ್ಶೆ– ದ.ರಾ.ಬೇಂದ್ರೆ ಪುಟ ೨೨

# ಅಧ್ಯಾಯ - ೨

೨.೧ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

೨.೨ ಸಂತ ಶರೀಫರ ಕುರಿತಾದ ಅಧ್ಯಯನಗಳ ಸಮೀಕ್ಷೆ

೨.೩ ಅಧ್ಯಯನ ವಿಧಾನ

# ಅಧ್ಯಾಯ – ೨

## ೨.೧ ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ:

ವರ್ಣಮಯವಾದ ವ್ಯಕ್ತಿತ್ವ ಹಾಗೂ ಜೀವನದ ಶರೀಫರು **ಸಂತರೆಂದು, ಶಿವಯೋಗಿ** ಎಂದು ವಿಖ್ಯಾತರಾದವರು. ಇಸ್ಲಾಂ–ಸೂಫಿ ಪಂಥದಲ್ಲಿ ಜನ್ಮವೆತ್ತಿ, ಶಿವಶರಣರ ಅತ್ಯಂತವಾದ ಸಾಮೀಪ್ಯ, ಪ್ರಭಾವವನ್ನು ಪಡೆದು, ಅದ್ವೈತಿಯೂ ಸಿದ್ಧರೂ ಆಗಿದ್ದ ಗುರುಗೋವಿಂದ ಭಟ್ಟರ ಶಿಷ್ಯನಾಗಿ, ಸ್ವತ: ಯೋಗಸಾಧನೆಗೈದು ಶರೀಫರು ಗಳಿಸಿದ ಜ್ಞಾನ ಮತ್ತು ಅನುಭವ ಸಂಪತ್ತು ಅಪಾರವಾದುದು. ಮಾನವತಾವಾದ ಹಾಗೂ ಸರ್ವ ಸಮಾನತೆ ಅವರ ವಿಶಿಷ್ಟತೆಗಳು. ಅವರ ತತ್ತ್ವ ಪದಗಳಲ್ಲಿ ಭಕ್ತಿ–ಯೋಗ–ಜ್ಞಾನ–ಅನುಭಾವ ಇವೆಲ್ಲ ಸಾಂದರ್ಭಿಕವಾಗಿ ಮೇಳೈಸಿವೆ. ತಮ್ಮದೇ ಅನನ್ಯ ವಿಶಿಷ್ಟ ಪಂಥ ಸ್ಥಾಪಿಸಿ, ಪರಂಪರೆ ಸೃಷ್ಟಿಸುವ ಉದ್ದೇಶ ಶರೀಫರಿಗೆ ಇರಲಿಲ್ಲ. ಅವರ ಉಪದೇಶಗಳು ಯಾವುದೇ ಉಪಕ್ರಮ–ಉಪ ಸಂಹಾರ ಪದ್ಧತಿಯನ್ನು ಅವಲಂಭಿಸಿಲ್ಲ. ಸನ್ನಿವೇಶಕ್ಕೆ ತಕ್ಕಂತೆ, ಆಗ ಸ್ಫುರಣವಾದ ತತ್ತ್ವ ವಿಚಾರವನ್ನು ಹಾಡಿದರು. ಹಾಡನ್ನು ಬರೆದಿಡುವ ಪ್ರಯತ್ನವನ್ನೂ ಅವರು ಮಾಡಲಿಲ್ಲ. ತನ್ನ ಎಲ್ಲ ಸಾಮರ್ಥ್ಯ ಕೌಶಲಗಳು ಮುಕ್ತಿಯನ್ನು ಒದಗಿಸಬೇಕಲ್ಲದೆ, ಬೇರೆ ಯಾವುದೇ ಯಶಸ್ಸು ತರಬೇಕು ಎಂದು ಬಯಸಿದವರಲ್ಲ.

ಶರೀಫರ ಪದಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಉಪನಿಷತ್ತುಗಳ, ಯೋಗಶಾಸ್ತ್ರದ ತತ್ತ್ವಜ್ಞಾನ ಹಾಗೂ ಸಾಧನಮಾರ್ಗಗಳ ಕುರುಹುಗಳು ಸ್ಪಷ್ಟವಾಗಿ ಕಾಣಿಸುತ್ತವೆ. ಗುರು ಗೋವಿಂದಭಟ್ಟರಿಂದ[೧], ಅಲ್ಲಮಪ್ರಭುವಿನಂತಹ ಅನುಭಾವಿಯ ಚರಿತೆಯಿಂದ[೨], ಶಿವಶರಣರಿಂದ[೩] ಬಹಳಷ್ಟು ಉಪಕೃತರಾಗಿದ್ದಾರೆ ಶರೀಫರು. ಋಷಿಗಳಿಂದ ಪ್ರಾರಂಭವಾದ ಆಧ್ಯಾತ್ಮಿಕ–ಅನುಭಾವೀ ಪರಂಪರೆಯಲ್ಲಿ ಶರೀಫರು ಪಡೆದುಕೊಂಡ ಜ್ಞಾನದ ಸ್ವರೂಪವನ್ನು ಗುರುತಿಸಿ, ಚರ್ಚಿಸಿ, ತಿಳಿದುಕೊಳ್ಳುವ ಅವಶ್ಯಕತೆಗಾಗಿ ಈ ಅಧ್ಯಯನ ಕೈಗೊಳ್ಳಲಾಗಿದೆ. ಸೂಫೀಪರಂಪರೆ ಹಾಗೂ ಶರಣ ಪರಂಪರೆಗಳ ಪ್ರಭಾವವನ್ನು ಗುರುತಿಸಿ ಅಧ್ಯಯನಗಳು ಈಗಾಗಲೇ ನಡೆದಿವೆ. ಆದರೆ ಶಾಸ್ತ್ರೀಯ ಸಾಂಪ್ರದಾಯಿಕ –ಔಪನಿಷದಿಕಪರಂಪರೆಯ ತಾತ್ತ್ವಿಕಜ್ಞಾನವನ್ನು ಶರೀಫರ ತತ್ತ್ವಪದಗಳು ಎಷ್ಟರ ಮಟ್ಟಿಗೆ ಉಪಯೋಗಿಸಿಕೊಂಡಿವೆ. ಎಷ್ಟರ ಮಟ್ಟಿಗೆ ಇವೆರಡಕ್ಕೂ ಅತ್ಯಂತ ಸಮೀಪದ ಹೋಲಿಕೆ/ಸಮಾನತೆ ಇದೆ ಎಂಬುದನ್ನು ಸ್ಪಷ್ಟೀಕರಿಸಲು ಈ ಅಧ್ಯಯನ ಮಾಡಲಾಗಿದೆ. ಭಾರತದಲ್ಲಿ ತತ್ತ್ವಜ್ಞಾನಕ್ಕೆ ಎಲ್ಲರೂ ಅಧಿಕಾರಿಗಳು ಎಂದು ಉಪನಿಷತ್ಕಾಲದಿಂದಲೂ ಅಂಗೀಕೃತವಾದ ವಿಚಾರವನ್ನು ಮತ್ತೊಮ್ಮೆ ದೃಢ ಪಡಿಸಲು ಈ ಅಧ್ಯಯನದಲ್ಲಿ ಪ್ರಯತ್ನಿಸಲಾಗಿದೆ.

ಕಳೆದ ಕೆಲ ವರ್ಷಗಳಿಂದ ಜಾನಪದ ಅಥವಾ ಮೌಖಿಕ ಆಕರಗಳ ಆಧಾರದಲ್ಲಿ ಮತ್ತು ಅನುಭಾವಿಪಂಥಿಗಳ ಅಧ್ಯಯನಗಳು ಹೆಚ್ಚುಹೆಚ್ಚಾಗಿ ನಡೆಯುತ್ತಿವೆ. ಕೈವಾರ ನಾರಣಪ್ಪ ಯೋಗಿ, ಮಂಟೇಸ್ವಾಮಿ, ಮಾದೇಶ್ವರ ಮುಂತಾದ ಜನಪದಸಂತರು, ಶಿಶುನಾಳಶರೀಫ, ಕಡಕೋಳ ಮಹಾದೇವಪ್ಪ, ಚೆನ್ನೂರ ಜಲಾಲಸಾಬ ಮುಂತಾದ ತತ್ತ್ವಪದಕಾರರ ಕುರಿತಾದ ಅಧ್ಯಂಯನಗಳು ನಡೆಯುತ್ತಿವೆ.ಇವುಗಳಲ್ಲಿನ ಗುಣ–ದೋಷಗಳನ್ನು ರಹಮತ್ ತರಿಕೆರೆಯವರು ಹೀಗೆ ಗುರುತಿಸಿದ್ದಾರೆ.

*೧) ಸಾಮಾಜಿಕಸಮಾನತೆಯ ಆಶಯಕ್ಕೆ ಒತ್ತು, ಕಾಣುವ ವೈರುಧ್ಯಗಳ ಬಗ್ಗೆ ನಿರ್ಲಕ್ಷ್ಯ.*

*೨) ಸಾಮಾಜಿಕನ್ಯಾಯಕ್ಕಾಗಿ ಹೋರಾಟದ ಅಂಗವಾಗಿ ಸಾಂಸ್ಕೃತಿಕವಿಶಿಷ್ಟತೆಯ ಸ್ಥಾಪನೆಗಾಗಿ, ತತ್ತ್ವಜ್ಞಾನಕ್ಕಿಂತ ಬೇರೆಯಾಗಿ ಸಾಂಸ್ಕೃತಿಕ ನಾಯಕರಾಗಿ, ಸಂಕೇತ ಗಳಾಗಿ ಕಂಡು ಉಪಯೋಗಿಸಿಕೊಳ್ಳುವುದು.*

*೩) ಸಮಾಜವಾದಿ, ಜಾತ್ಯತೀತ ಮೌಲ್ಯಗಳಿಗೆ ಹತ್ತಿರವೆನಿಸುವ ರಚನೆಗಳಿಂದಾಗಿ ಆಧುನಿಕ ಜಾತ್ಯತೀತವಾದಿಗಳ ಆಯುಧವೆಂಬಂತೆ ರೂಪುಗೊಳ್ಳುವುದು.*

ಯಾಂತ್ರಿಕತೆಯ ಆಧುನಿಕತೆಯು ಕೇಡು. ಗ್ರಾಮೀಣ–ಜಾನಪದ –ಸಾಂಪ್ರದಾಯಿಕ ಜಗತ್ತು ಒಳಿತು ಎಂಬ ಅವಿಚಾರಿತಸಿದ್ಧಾಂತದ ಪ್ರತಿಪಾದನೆಯೊಂದಿಗೆ, ದೇಶೀಯವಾದ ಭಾಷೆ–ಸಂಸ್ಕೃತಿಗಳ ಹೆಸರಿನಲ್ಲಿ ನಡೆಯುತ್ತಿರುವ ಚಿಂತನೆಯು ಪರದೇಶೀಯಆಧುನಿಕತೆ ಬಗ್ಗೆ ಸಂಶಯವನ್ನು ಸಂಸ್ಕೃತಶಿಷ್ಟಪರಂಪರೆಗಳ ಬಗ್ಗೆ ಅಸಮಾಧಾನವನ್ನು, ಜಾನಪದದ ಬಗ್ಗೆ ವಿವೇಚನರಹಿತ ಮೆಚ್ಚುಗೆಯನ್ನು ತೋರಿಸುತ್ತವೆ, ಇತ್ಯಾದಿ. ಈ ಹಿನ್ನೆಲೆಯಲ್ಲಿ ಶಿಶುನಾಳ ಶರೀಫರ ಬದುಕು ಯಾಕಾಗಿ, ಯಾವ ಉದ್ದೇಶಕ್ಕಾಗಿ ಸಾಗಿತು? ಅವರ ಲಕ್ಷ್ಯವೇನು? ಸಾಧನೆಯೇನು? ಹೊಂದಿದ ಗುರಿಯೇನು ಎಂಬ ಪ್ರಶ್ನೆಗಳಿಗೆ ತತ್ತ್ವಪದಗಳ ಆಧಾರದಲ್ಲೇ ಪ್ರಾಚೀನಪರಂಪರೆಗೆ ಅನುಗುಣವಾದ ಮಾರ್ಗವನ್ನು ಅನ್ವೇಷಿಸಲು ಈ ಅಧ್ಯಯನ ನಡೆಸಲಾಗಿದೆ. ಪ್ರಾಚೀನ ಪರಂಪರೆಗೆ ಅನುಗುಣವಾದ ಮಾರ್ಗವೆಂದರೆ, ಋಷಿಗಳು ನೀಡಿದ ಉಪನಿಷತ್ತುಗಳು, ಗೀತೆ, ದರ್ಶನಶಾಸ್ತ್ರ ಮತ್ತೆಮತ್ತೆ ಘೋಷಿಸಿರುವ **'ಜ್ಞಾನದಿಂದಲೇ ಕೈವಲ್ಯ'** ಎಂಬ ಅಭಿಪ್ರಾಯ ಹಾಗೂ ಸಿದ್ಧಾಂತ.

**'ಶಿಶುನಾಳ ಶರೀಫರ ಜೀವನ–ದರ್ಶನ'** ಎಂಬ ವಿಚಾರವನ್ನು ಎಂ. ಎಸ್. ಸಿಂದಗಿಯವರು (೧೯೭೦), ಶಿಶುನಾಳ ಶರೀಫ್ ಮತ್ತು ಸಂತ ಕಬೀರ್ ಇವರ ತೌಲನಿಕಅಧ್ಯಯನವನ್ನು ಆರ್. ಪಿ. ಹೆಗಡೆಯವರು (೧೯೯೪) ಧಾರವಾಡದ ಕರ್ನಾಟಕವಿ.ವಿಯ ಆಶ್ರಯದಲ್ಲಿ ಡಾಕ್ಟರೇಟ್ ಪದವಿಗಾಗಿ ಅಧ್ಯಯನ ನಡೆಸಿದ್ದಾರೆ. ಇನ್ನು ಸೂಫಿಪಥ ಮತ್ತು ಶರಣಪಥದ ಕುರಿತಾಗಿ ಅಬ್ದುಲ್ ಹಮೀದ್ ಅವರು (೧೯೮೯)., ಕರ್ನಾಟಕದ ಗಡಿಭಾಗದಲ್ಲಿ ಹಿಂದೂ–ಮುಸ್ಲಿಂ ಸಂಸ್ಕೃತಿ ಬಾಂಧವ್ಯದ ವಿಚಾರವಾಗಿ ಮಲ್ಲಿಕಾರ್ಜುನ ಗೌಡ (೧೯೯೭) ಅವರೂ ಅಧ್ಯಯನ ನಡೆಸಿದ್ದಾರೆ(ಕುವೆಂಪು ವಿ.ವಿ).

ಡಾ। ಶಿವಾನಂದ ಗುಬ್ಬಣ್ಣವರ ಇವರು ಶಿಶುನಾಳ ಶರೀಫರ ಗೀತೆಗಳು (ಬರಕೋ ಪದಾ ಬರಕೋ) ಎಂಬ ಸಂಕಲನವನ್ನು ಸಂಪಾದಿಸಿದ್ದಾರೆ. ವಿಶ್ವಕನ್ನಡ ಸಮ್ಮೇಳನದ ಅಂಗವಾಗಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ವತಿಯಿಂದ ಇದು ಪ್ರಕಟಿತವಾಗಿದೆ. ನಾಲ್ಕುನೂರ ಹತ್ತೊಂಬತ್ತು ಗೀತೆಗಳ ಸಂಗ್ರಹವಿದಾಗಿದ್ದು ಪ್ರತಿಪಾದಿತ ವಿಷಯದ ಆಧಾರದಲ್ಲಿ ಬೇರೆ ಬೇರೆ ಶೀರ್ಷಿಕೆಗಳನ್ನು ಕೊಟ್ಟು ವಿಭಾಗಿಸಿದ್ದಾರೆ. ದೇವಸ್ತುತಿ, ಶಕ್ತಿಸ್ತುತಿ, ಗುರುಸ್ತುತಿ, ಬೋಧ, ಸಾಧು, ಶಿವಯೋಗಿ, ಮನ, ಮಾನಿನಿ, ಘಟನಾತ್ಮಕ, ನೀತಿ, ಪಶುಪಕ್ಷಿಕೀಟ, ದಂಡಕ, ಕಾಲಜ್ಞಾನ, ಲಾವಣಿ, ಹೋಳಿಪದ, ಮಂಗಳಾರತಿ, ರಿವಾಯತ್ ಮುಂತಾಗಿ ಹದಿನೇಳು ಬಗೆಯಲ್ಲಿ ವಿಭಾಗ ಮಾಡಿದ್ದಾರೆ. ಈ ವಿಭಾಗ ಕ್ರಮ ಅಥವಾ ವರ್ಗೀಕರಣ ದೋಷದೂರವಲ್ಲ. ಕೆಲಪದಗಳು ಎರಡು ಮೂರು ಬಗೆಯಲ್ಲಿ ಸೇರಿಕೊಳ್ಳುವಂತೆ ಇದೆ. ಆದರೂ ಮೊತ್ತ ಮೊದಲ ಬಾರಿಗೆ ಬಹಳಷ್ಟು ವಿವರಗಳನ್ನು ಹೊಂದಿ ಪ್ರಕಟಿತವಾದ ಪುಸ್ತಕವಿದು. ಶರೀಫರ ಜೀವನ, ಪ್ರಭಾವ ತೋರುವ ಘಟನೆಗಳು, ಪದಗಳ ಸಾಂದರ್ಭಿಕ ಸನ್ನಿವೇಶಗಳ ಚಿತ್ರಣ, ಅವರು ಸಂಚರಿಸಿದ ಊರುಗಳು, ಪದಕೋಶಗಳು ಇವೆಲ್ಲ ವಿವರಗಳೊಂದಿಗೆ ಸಮಗ್ರವಾಗಿ ಮೂಡಿಬಂದು ಅಧ್ಯಯನಶೀಲರಿಗೆ ಮಹೋಪಕಾರಮಾಡುವಂತೆ ರಚಿತವಾಗಿದೆ. ಅಲ್ಲದೆ ವಿಶೇಷತೆ ಏನೆಂದರೆ ಶಿವಾನಂದ ಗುಬ್ಬಣ್ಣವರ ಅವರೇ ಹೇಳುವಂತೆ " ಉತ್ತರ ಕರ್ನಾಟಕದ ಆಡುಮಾತಿನ ಕಾಕು, ಧ್ವನಿ ರಮ್ಯತೆಗಳೆ ಕಿವಿದೆರೆದು ಅದರ ಒಳ ಹೊರ ಸವಿ ಸೊಬಗನ್ನು..." ದಾಖಲಿಸಿದ್ದಾರೆ.[7]

ಡಾ। ಎನ್.ಎಸ್. ಲಕ್ಷ್ಮೀನಾರಾಯಣಭಟ್ಟ ಇವರೂ ಕೂಡ ವಿಸ್ತಾರವಾದ ವಿವರಣೆ, ವಿಶಿಷ್ಟ ತತ್ತ್ವಪದಗಳ ಸ್ವಾರಸ್ಯನಿರೂಪಣೆಯೊಂದಿಗೆ ಸಂಕ್ಷಿಪ್ತವಿಮರ್ಶೆಯನ್ನು ಮಾಡಿ ನೂರಾರು ಪದಗಳ ಸಂಕಲನವನ್ನು ಪ್ರಕಟಿಸಿದ್ದಾರೆ. ಪದಗಳಲ್ಲಿ ಪಾಠಾಂತರಗಳು ಇರುವಂತೆಯೇ ಭಾಷಾಶೈಲಿಯಲ್ಲೂ ವ್ಯತ್ಯಾಸ ಕಾಣಿಸುತ್ತದೆ. ಕೆಲವೆಡೆ ಗ್ರಾಮ್ಯತೆಯನ್ನು ನಿವಾರಿಸಿಕೊಂಡು ಗೇಯತೆಗೆ ಅನುಕೂಲವಾಗುವಂತೆ ಮಾರ್ಪಾಡು ಮಾಡಿರುವಂತೆ ತೋರುತ್ತದೆ. ಈ ಸಂಕಲನದಲ್ಲಿ ಯಾವುದೇ ವರ್ಗೀಕರಣವಿಲ್ಲ. ಇನ್ನು ಜನಪದ ಪ್ರಕಾಶನದಿಂದ ಪ್ರಕಟಿತವಾದ ರಾಮಚಂದ್ರ ಪ್ರಭು ಇವರಿಂದ ಸಂಪಾದಿತವಾದ ಸಂಕಲನವು ಪ್ರಸ್ತಾವನೆ, ಕೆಲ ಪದಗಳ ಹಿನ್ನೆಲೆಯ ಸರಸನಿರೂಪಣೆಯೊಂದಿಗೆ ಇರುವ ನಲವತ್ತುಪದಗಳ ಚಿಕ್ಕಕೃತಿ. ಧಾರವಾಡದ ಸಮಾಜಪುಸ್ತಕಾಲಯದಿಂದ ಪ್ರಕಟಿತವಾದ ಆರ್.ಎನ್. ಸುಂಕದ ಅವರು ಸಂಪಾದಿಸಿದ ಸಂಗ್ರಹ ಶಿಶುನಾಳರ ಅನುಭಾವ ಗೀತಮಂಜರಿಯು ಕವಿಕಾವ್ಯಪರಿಚಯದೊಂದಿಗೆ ನೂರಹತ್ತೊಂಭತ್ತು ಪದಗಳನ್ನು ಒಳಗೊಂಡಿದೆ. ಹಾಡಲು ಅನುಕೂಲಿಸುವ ರೀತಿಯಲ್ಲಿ ರಾಗತಾಳಗಳನ್ನು ಸೂಚಿಸಲಾಗಿದೆ. ಸ್ಥೂಲವಾಗಿ ಸ್ತುತಿ, ಭಕ್ತಿ, ನೀತಿ,

ಬೆಡಗು, ಲಾವಣಿ, ಸಂಕೀರ್ಣ ಎಂಬ ವಿಭಾಗಗಳನ್ನು ಮಾಡಲಾಗಿದೆ. ಗುರುದೇವ ಆರ್.ಡಿ.ರಾನಡೆಯವರ ಕರ್ನಾಟಕದ ಅನುಭಾವಿಗಳ ಕುರಿತಾದ ಗ್ರಂಥದಲ್ಲಿ (Pathway to God in Kannada Literature) ಶರೀಫರ ಹಾವು ತುಳಿದೇನೇ ಮಾನಿನಿ, ಚೋಳ ಕಡಿತು ಎಂಬ ಪದಗಳ ವಿಮರ್ಶೆಯನ್ನು ಮಾಡಿದ್ದಾರೆ. ಡಾ। ವಿಜಯಶ್ರೀ ಸಬರದ ಇವರು ಕಡಕೋಳ ಮಡಿವಾಳಪ್ಪ ಮತ್ತು ಶಿಶುನಾಳ ಶರೀಫರ ಪದಗಳಲ್ಲಿ ಅನುಭಾವದ ಅಭಿವ್ಯಕ್ತಿ ಎಂಬ ಲೇಖನದಲ್ಲಿ (ಸಾಹಿತ್ಯ ವಿಮರ್ಶೆ ೨೦೦೧– ಕರ್ನಾಟಕ ಸಾಹಿತ್ಯ ಅಕಾಡೆಮಿ) ಸಾಂದರ್ಭಿಕ ವಿವೇಚನೆ ಮಾಡಿದ್ದಾರೆ. ಧ್ವನಿಮುದ್ರಿಕೆಗಳ ಮೂಲಕ, ದೂರದರ್ಶನ ಧಾರಾವಾಹಿಗಳ, ಸಿನಿಮಾಗಳ ಮುಖೇನ ಶರೀಫರು ಪ್ರತಿಯೊಬ್ಬ ಕನ್ನಡಿಗನಿಗೆ ಪರಿಚಿತರೇ. ಬಿಡಿ ಬಿಡಿಯಾದ ಪದಗಳ ಬಗ್ಗೆ, ಒಟ್ಟಾರೆ ತತ್ತ್ವ ಪದಕಾರರ ಬಗ್ಗೆ ಸೂಫಿ ತತ್ತ್ವಗಳ ಬಗ್ಗೆ, ಅನುಭಾವಿಗಳ ಬಗ್ಗೆ, ಹೀಗೆ ಬಗೆಬಗೆಯ ಸಂದರ್ಭಗಳಲ್ಲಿ ಶರೀಫರ ಉಲ್ಲೇಖ ವಿಮರ್ಶೆ ಬೇಕಾದಂತೆ ನಡೆದಿದೆ. ಆದರೆ ಶರೀಫರ ಪದಗಳಲ್ಲಿ ಎದ್ದು ಕಾಣುವ ತತ್ತ್ವಜ್ಞಾನೀ ಪರಂಪರೆಯ ಮೂಲವನ್ನು ಅಥವಾ ಅವರ ಸಾಧನಸಂಪತ್ತಿನ ಮೂಲಬೇರುಗಳನ್ನು ಗುರುತಿಸುವ ಪ್ರಯತ್ನ ಈ ವರೆಗೆ ಆಗಿಲ್ಲ. ಸಹಸ್ರಮಾನಗಳಿಂದ ಅನೂಚಾನವಾಗಿ ವಿವಿಧ ರೂಪಾಂತರಗಳಿಂದ ಭಕ್ತಿ ತತ್ತ್ವಗಳು, ಯೋಗಸಾಧನೆಯ ಪಂಥಗಳು, ವೇದಾಂತದ–ವೈರಾಗ್ಯದ ವಿವಿಧ ಶಾಖೆಗಳು ಭಾರತದಲ್ಲಿ ಜನ್ಮ ತಾಳಿವೆ. ಗುರುಕುಲಪರಂಪರೆಯಲ್ಲಿ ಶಾಸ್ತ್ರೀಯವಾಗಿ ಅಧ್ಯಯನ, ಸಾಧನೆಗಳು ನಡೆದಿವೆ. ಆ ಕಟ್ಟುಪಾಡುಗಳನ್ನು ಮೀರಿ ಸ್ವತಂತ್ರವಾಗಿ, ಪ್ರತ್ಯೇಕವಾಗಿಯೂ ತತ್ತ್ವಜ್ಞಾನದ ಸಂಪಾದನೆ ಹಾಗೂ ಪ್ರಸಾರಗಳು ನಡೆದಿವೆ. ಅಂತಹ ವರ್ಗಕ್ಕೆ ಸೇರಿದ ಶರೀಫರ ಪದಗಳಲ್ಲಿ ಭಕ್ತಿ ಸೂತ್ರಗಳ ಭಗವದ್ಗೀತೆಯ, ಯೋಗೋಪನಿಷತ್ತುಗಳ ಸಾರಭೂತವಾದ ಅಂಶಗಳು ಪ್ರತಿಪಾದಿತವಾಗಿವೆ. ಆಯಾ ಸಾಮ್ಯಾಂಶಗಳನ್ನು ಗುರುತಿಸಿ ಉಲ್ಲೇಖಿಸುವ ಅಲ್ಪ ಪ್ರಯತ್ನವನ್ನು ಈ ಪ್ರಬಂಧದಲ್ಲಿ ಮಾಡಲಾಗಿದೆ.

**ಅಧ್ಯಯನ ವಿಧಾನ:** ಡಾ। ಶಿವಾನಂದ ಗುಬ್ಬಣ್ಣವರ – ಇವರ ಸಂಗ್ರಹವನ್ನು ಆಧಾರವಾಗಿಟ್ಟುಕೊಂಡು ಪ್ರಸ್ತುತ ಪ್ರಬಂಧದ ಅವಶ್ಯಕತೆಗೆ ತಕ್ಕಂತೆ ಪದಗಳನ್ನು ಆಯ್ದುಕೊಳ್ಳಲಾಗಿದೆ. ಅಧ್ಯಾತ್ಮ ಪ್ರವೃತ್ತಿಗೆ ಪ್ರೇರಕವಾದ, ಭಕ್ತಿಯ, ಯೋಗದ, ತತ್ತ್ವಾನುಭವದ ಪದಗಳನ್ನು ಗುರುತಿಸಿ ಪರಂಪರಾಗತ ಶಾಸ್ತ್ರಗಳೊಂದಿಗೆ ಹೊಂದಿರುವ ಸಮಾನತೆಯನ್ನು ಸ್ಫುಟವಾಗಿ ದರ್ಶಿಸಲಾಗಿದೆ. ಆಯ್ದುಕೊಂಡ ಪದದ ಕೊನೆಯಲ್ಲಿ ಸೂಚಿಸಿದ ಸಂಖ್ಯೆ ಶಿವಾನಂದ ಗುಬ್ಬಣ್ಣವರ ಸಂಕಲಿತ ಗ್ರಂಥದ ಕ್ರಮಸಂಖ್ಯೆಯಾಗಿದೆ. ಒಂದೆರಡು ಪದಗಳನ್ನು ಡಾ। ಎನ್.ಎಸ್. ಲಕ್ಷ್ಮೀನಾರಾಯಣಭಟ್ಟರ ಸಂಗ್ರಹದಿಂದ ಸ್ವೀಕರಿಸಲಾಗಿದೆ.

******

**ಟಿಪ್ಪಣಿ:**

೧. *ಸದ್ಗುರುನಾಥನ್ಹೊರತು ಗತಿ ಬ್ಯಾರಿಹುದೇ?*

*ಮುಕ್ತಿದಾತನೆನ್ನುತಾ ಶ್ರುತಿ ತಾ ಸಾರುತಿದೆ.*

*................................................*

*ಏನು ಹೇಳಲಿ ಆತನ ದಯದಿಂದಾ*

*ದೇವ ಶಿಶುನಾಳೇಶನ ವರದಿಂದಾ*

*ತಾನು ನಾನೇ ಆದನು ಗುರುಗೋವಿಂದಾ॥ ( ೪೨)*

*೨. ಕಲ್ಯಾಣ ನಗರದಲಿ ಎಲ್ಲ ಗಣಂಗಳು ಅಲ್ಲಮ ಪ್ರಭುವನು ಕಾಣುತಲಿ (೨೮೬)*

*೩. ಶಿವಲೋಕದಿಂದೊಬ್ಬ ಸಾಧು ಬಂದಾನು.. , ಶ್ರೀ ಬಸವೇಶ್ವರ ದಂಡಕ (೨೬೮)*

# ಅಧ್ಯಾಯ - ೩

೩.೧ ಅಧ್ಯಾತ್ಮಚಿಂತನೆ - ಸಾಧನೆಗಳಿಗೆ ಅವಶ್ಯಕವಾದ ಪ್ರಾಥಮಿಕಅರ್ಹತೆಗಳು.

೩.೨ ಶರೀಘರ ಪ್ರತಿಪಾದನೆಯ ಕ್ರಮಗಳು.

೩.೩ ಅಧ್ಯಾತ್ಮಪ್ರವೃತ್ತಿಗೆ ಒದಗುವ ತಡೆಗಳು.

# ಅಧ್ಯಾಯ –೩

## ಅಧ್ಯಾತ್ಮ ಚಿಂತನೆ– ಸಾಧನೆಗಳಿಗೆ ಅವಶ್ಯಕವಾದ ಪ್ರಾಥಮಿಕಅರ್ಹತೆಗಳು

### ೩.೧. ವೇದಾಂತಶಾಸ್ತ್ರಗಳಲ್ಲಿ ಉಕ್ತವಾದ ನಾಲ್ಕು ಸಾಧನಗಳು:

ಆಯ್ಕೆಯ ಸ್ವಾತಂತ್ರ್ಯವಿಲ್ಲದೆ ಜನ್ಮ ಎತ್ತುವ ಜೀವಿಗಳಲ್ಲಿ ಮನುಷ್ಯತ್ವ ಪಡೆಯುವುದು ಮೊದಲ ಭಾಗ್ಯ. ಅದರಲ್ಲೂ ಮುಮುಕ್ಷುತ್ವ ಪಡೆಯುವುದು ಇನ್ನೂ ಹೆಚ್ಚಿನ ಭಾಗ್ಯ. ವಿಧಿಬದ್ಧವಾಗಿ ಸಂಪನ್ನಗೊಳಿಸುವ ಶಾಸ್ತ್ರೋಕ್ತಕರ್ಮಗಳಿಂದ, ಸಂಪಾದಿಸಿದ ಆಧ್ಯಾತ್ಮವಿದ್ಯೆಯಿಂದ ಚಿತ್ತಶುದ್ಧಿ ದೊರೆತು ಸಾಂಸಾರಿಕವಿಷಯಗಳಲ್ಲಿ ವಿರಕ್ತಿ ಮೂಡುತ್ತದೆ. ಹೀಗೆ ಉದಯಿಸಿದ ಪ್ರವೃತ್ತಿಯನ್ನು ಯೋಗ್ಯಗುರುವಿನ ಮಾರ್ಗದರ್ಶನದ ಮೂಲಕ, ನಿರಂತರಅಭ್ಯಾಸ ಹಾಗೂ ಅನವರತವಾದ ದೃಢ ಪ್ರಯತ್ನಗಳಿಂದ ಸ್ಥಿರಗೊಳಿಸಬೇಕು. ಅದು ಕ್ರಮವಾಗಿ ಮುಂದುಮುಂದಿನ ಹಂತಗಳಿಗೆ ಒಯ್ಯುತ್ತಾ ಜ್ಞಾನ ಮೂಡಿಸುವಲ್ಲಿ ಸಹಾಯಕವೂ ಸಹಕಾರಿಯೂ ಆಗುತ್ತದೆ. ಸದಾನಂದ ಯೋಗೀಂದ್ರ ವಿರಚಿತವಾದ ವೇದಾಂತಸಾರ ಎಂಬ ಗ್ರಂಥ[1] ಸಾರಭೂತವಾದ ನಾಲ್ಕು ಸಾಧನಗಳನ್ನು ತಿಳಿಸಿದೆ. 'ಸಾಧನ ಚತುಷ್ಟಯ'ಗಳೆಂದು ಪ್ರಸಿದ್ಧವಾದ ಅವುಗಳ ಸಂಕ್ಷಿಪ್ತ ವಿವರಣೆ ಹೀಗಿದೆ.

೧. **ನಿತ್ಯಾನಿತ್ಯವಸ್ತುವಿವೇಕ:** ಜಗತ್ತಿನಲ್ಲಿ ತೋರುವ ಅನೇಕಾನೇಕ ವಸ್ತುಗಳಲ್ಲಿ ನಿತ್ಯ–ಸತ್ಯ ಶಾಶ್ವತ–ಸ್ಥಿರವಾದುವು ಮತ್ತು ಅನಿತ್ಯ–ಅಸತ್ಯ–ನಶ್ವರ–ಚಂಚಲವಾದುವು ಯಾವುವೆಂದು ಗುರುತಿಸುವ ವಿವೇಚನಾಸಾಮರ್ಥ್ಯ. ಇದರಿಂದಾಗಿ ವಸ್ತುವಿನ ಮೌಲ್ಯವನ್ನು ಸ್ಥೂಲವಾಗಿ ತಿಳಿಯಬಹುದು. ಆಗ ಅನಿತ್ಯವಾದ ವಸ್ತುಗಳನ್ನು, ಅನಿತ್ಯವಾದ ಸುಖಗಳನ್ನು ಸಂಪಾದಿಸುವ ನಿರರ್ಥಕ ಪ್ರಯತ್ನವನ್ನೇ ಕೈಬಿಟ್ಟು ನಿತ್ಯವಸ್ತುವಿನ ಪ್ರಾಪ್ತಿಗಾಗಿ ಯತ್ನಶೀಲರಾಗಬಹುದು.

೨. **ಇಹಾಮುತ್ರಾರ್ಥಫಲಭೋಗವಿರಾಗ:** ಮನುಷ್ಯಲೋಕದಲ್ಲಿ ದೊರೆವ ಸಮಸ್ತಸುಖಗಳು ಇಹಸುಖ, ಐಹಿಕ ಎನಿಸುತ್ತವೆ. ಮರಣಾನಂತರ ದೊರೆಯಬಹುದಾದ ಸ್ವರ್ಗವೆಂಬ ಪರಲೋಕವನ್ನು ಆಮುಷ್ಮಿಕ ಎನ್ನುತ್ತಾರೆ. ಇವೆರಡೂ ಕರ್ಮಜನ್ಯವಾದ ಫಲಗಳು. ಕಾಲಾಂತರದಲ್ಲಿ ಕರಗಿ ಹೋಗುವಂತಹವು. ಆದ್ದರಿಂದ ಅಲ್ಪವೂ ಅನಿತ್ಯವೂ ಆದ ಈ ಸುಖಗಳ ಬಗ್ಗೆ ವೈರಾಗ್ಯ ಹೊಂದುವುದು.

**೩. ಶಮ–ದಮ–ಉಪರತಿ–ತಿತಿಕ್ಷಾ–ಸಮಾಧಾನ–ಶ್ರದ್ಧೆ ಎಂಬ ಷಡ್ಗುಣಗಳು:**

ಶಮ–ದಮ–ಉಪರತಿ ಎಂದರೆ ಮನಸ್ಸಿನ, ಕಣ್ಣು–ಕಿವಿ ಮುಂತಾದ ಜ್ಞಾನೇಂದ್ರಿಯಗಳ, ವಾಕ್–ಪಾಣಿ ಮುಂತಾದ ಕರ್ಮೇಂದ್ರಿಯಗಳ ನಿಯಂತ್ರಣ. ತಿತಿಕ್ಷಾ ಎಂದರೆ ಶೀತೋಷ್ಣ, ಲಾಭ

ನಷ್ಟ, ಮಾನಾಪಮಾನ, ಸುಖದು:ಖಗಳೆಂಬ ದ್ವಂದ್ವಗಳನ್ನು ಸಹಿಸುವುದು. ಈ ದ್ವಂದ್ವಗಳು ಶರೀರಕ್ಕೆ ಸಂಬಂಧಿಸಿರುವುವು ಹೊರತು ಆತ್ಮನಿಗಲ್ಲ ಎಂಬ ಸ್ಥಿರತೆ. ಇವೆಲ್ಲ ಸಾಧನೆಗಳಿಂದ ನಿಯಂತ್ರಿತವಾದ ಮನಸ್ಸನ್ನು ಶ್ರವಣ–ಮನನ–ನಿದಿಧ್ಯಾಸನಗಳಲ್ಲಿ ನೆಲೆಗೊಳಿಸುವುದೇ ಸಮಾಧಾನ. ಗುರುವು ಉಪದೇಶಿಸಿದ ತತ್ತ್ವದಲ್ಲಿ ಅವಿಚಲವಾದ ವಿಶ್ವಾಸ ಹೊಂದಿರುವುದು ಶ್ರದ್ಧೆ.

೪ : **ಮುಮುಕ್ಷುತ್ವ**. ಅಂದರೆ ಅನುಕ್ರಮವಾಗಿ ಹಿಂದಿನ ಸಾಧನೆಗಳು ಪೂರೈಸಿದ ವ್ಯಕ್ತಿಯಲ್ಲಿ ಮೋಕ್ಷದ ಆಕಾಂಕ್ಷೆ ಇರಬೇಕು. ಅಷ್ಟಾದರೆ ಅವನು ಮೋಕ್ಷಕ್ಕೆ ಅಧಿಕಾರಿ ಎನಿಸುತ್ತಾನೆ. ಆತ್ಮ ಜ್ಞಾನಾನುಭವಗಳನ್ನು ಪಡೆಯಲು ಅರ್ಹನಾಗುತ್ತಾನೆ.

**೫ : ಶರೀಫರು ಪ್ರತಿಪಾದಿಸಿದ ವಿಧಾನಗಳು:**

ಶುಕ್ಲಯಜುರ್ವೇದದ ಕಾಣ್ವಶಾಖೆಯ ಬೃಹದಾರಣ್ಯಕ ಉಪನಿಷತ್ತಿನಲ್ಲಿ (೪.೪.೨೩) ಉಕ್ತವಾದ ಶಾಂತನೂ, ದಾಂತನೂ, ಉಪರತನೂ ತಿತಿಕ್ಷುವೂ ಆದವನು ಸಮಾಹಿತನಾದಾಗ ತನ್ನಲ್ಲೇ ಆತ್ಮನನ್ನು ಕಾಣುತ್ತಾನೆ ಎಂಬ ವಚನಕ್ಕೆ ಸಂವಾದಿಯಾಗಿ ಸಂತಶರೀಫರು ಹೀಗೆ ಹಾಡಿದ್ದಾರೆ.

*ಸಾಧನ ಜ್ಞಾನ ಚತುಷ್ಟಯ ಕೊನೆಯೊಳು*
*ಭೇದವಳಿದು ಪರನಾದ ಮೇಲೆ ।*
*ವೀರ ಯೋಗಿವರ ಪಾರ ಪರಾತ್ಪರ*
*ಮೀರಿದ ದಾರಿಯ ತೋರಿಸಿದನು ।*
*ಶಿಶುನಾಳಧೀಶನ ಸಖ ಗೋವಿಂದನು*
*ವ್ಯಸನಗಳಿದು ನಿರ್ವ್ಯಸನಗೊಳಿಸೆ ।*
*ಬಹುಚಂದ, ಬಹುಚಂದ, ಬೋಧವಾದೀತೆ ಆನಂದಾ ॥ (53)*

ಭೇದಗಳಳಿದು, ವ್ಯಸನಗಳು ನಿರ್ಮೂಲವಾದ ಮೇಲೆ ಆತ್ಮ– ಪರಮಾತ್ಮ ಐಕ್ಯಭಾವ ತೋರಿದ ಮೇಲೆ ಅನುಭವಿಸುವ ಆನಂದ ಅದೆಷ್ಟು ಚಂದ ಎಂದು ಧನ್ಯತೆಯಿಂದ ಉದ್ಗರಿಸಿದ್ದಾರೆ.

ನಿತ್ಯಾನಿತ್ಯತ್ವದ ಸೂಚಕವಾದ ಈ ಕೆಳಗಿನ ತತ್ತ್ವಪದ ಎಲ್ಲರಿಗೆ ಅನುಭವಕ್ಕೆ ಬರುತ್ತಿರುವ ನಶ್ವರತೆಯನ್ನು ಸರಳವಾಗಿ ತಿಳಿಸುತ್ತದೆ. ಗೆಳೆಯನ ಮಾತಿನಂತೆ ಅನುನಯದಿಂದ ವಿಷಯದ ಗಂಭೀರತೆಯನ್ನು ಮನದಟ್ಟು ಮಾಡುತ್ತದೆ.

*ಸ್ಥಿರವಲ್ಲಾ ಕಾಯಾ ಸ್ಥಿರವಲ್ಲಾ ಈ*
*ಅಸ್ಥಿರ ಶರೀರವ ನಂಬಲಿ ಬ್ಯಾಡಾ।*
*ಮರಳಿ ಮರಳಿ ಬಹುತ್ವರದಿ ಭವಕೆ ಬಂದು*
*ಸೊರಗಿ ಸುಖ ದು:ಖ ಎರಡರ ಮಧ್ಯದಿ ॥ (216)*

ಹುಟ್ಟು, ಇರುವಿಕೆ, ಬೆಳವಣಿಗೆ, ಪರಿವರ್ತನೆ, ಕ್ಷೀಣತೆ ಹಾಗೂ ನಾಶ ಎಂಬ ಷಡ್ಭಾವ ವಿಕಾರಗಳನ್ನು ಹೊಂದಿದ ಶರೀರ ಬಹುನಶ್ವರ. ದೇಹ, ಅಂಗೋಪಾಂಗಗಳು, ಇಂದ್ರಿಯಗಳು ಇವೆಲ್ಲ ಸದೃಢವೆಂದು

ಕಂಡು ಬಂದರೂ ಹಾಗಿಲ್ಲ. ಅಲ್ಲದೆ **"ಪುನರಪಿ ಜನನಂ ಪುನರಪಿ ಮರಣಂ"**ಎಂಬ ಆಚಾರ್ಯೋಕ್ತಿಯಂತೆ ಜೀವನು ಮತ್ತೆಮತ್ತೆ ಹುಟ್ಟಿ ಸಾಯುತ್ತಾನೆ. ಪರಂಪರೆಯಾಗಿ ನೋವು ನಲಿವುಗಳನ್ನು ಅನುಭವಿಸಲೇ ಬೇಕು. ಹಾಗಾಗಿ ಅನಿತ್ಯವಾದ ದೇಹದ ಬಗ್ಗೆ, ಅದರ ಸಾಮರ್ಥ್ಯಗಳ ಬಗ್ಗೆ ಹೆಮ್ಮೆ ಪಡುವಂತದ್ದೇನೂ ಇಲ್ಲ ಎಂದು ಎಚ್ಚರಿಸುತ್ತಾರೆ ಶರೀಫರು. ಜೀವನದ ಕ್ಷಣಿಕತೆ ಮತ್ತು ನಿರರ್ಥಕತೆಯನ್ನು ಮುಂದಿನ ಪದ ಚೆನ್ನಾಗಿ ವರ್ಣಿಸುತ್ತದೆ.

*ಹೋಗುತಿಹುದು ಕಾಯಾ ವ್ಯರ್ಥ, ಇದರ*
*ಲಾಘವ ತಿಳಿದವ ಯೋಗಿ ಸಮರ್ಥ ।*
*ಏಳು ಜನ್ಮಾಂತರ ದಿನವು ಹೀಂಗ*
*ಹೇಳದೆ ಹೋದವು ನಿನಗಿಲ್ಲೋ ನೆನಹು ।*
*ಭೋಗ ಲಂಪಟ ಸುಖ ಘನವು ಭವ*
*ರೋಗದಿ ಮರಣಕ್ಕೆ ಆದಿಯೋ ಅನುವು ।*
*ಬದುಕೇನು ಮಾಡಿದಿ ಇಲ್ಲೇ ಸುಳ್ಳೇ*
*ಮುದಿಕ್ಯಾಗಿ ಮೆರೆದೆಲ್ಲೇ ಛೀ ಹುಚ್ಚ ಮರುಳೆ ॥ ( 217)*

ಭಾರತೀಯತತ್ತ್ವಜ್ಞಾನಸಂಪ್ರದಾಯಗಳ ಮೇಲೆ ಶಂಕರಾಚಾರ್ಯರು ಬೀರಿದ ಪ್ರಭಾವ ಅಪಾರ. ಗುರುವಾದ ಗೋವಿಂದಭಟ್ಟರು ಅದ್ವೈತಿಯಾದ ಕಾರಣದಿಂದ ಶರೀಫರಿಗೆ ಆಚಾರ್ಯರ ಉಪದೇಶಗಳ, ಕೃತಿಗಳ ಪರಿಚಯ ಆಗಿದ್ದಿರಬಹುದು. ಏಕೆಂದರೆ ಅವರ ರಚನೆಯಾದ:[a]–

*ಆಯುರ್ನಶ್ಯತಿ ಪಶ್ಯತಾಂ ಪ್ರತಿದಿನಂ ಯಾತಿ ಕ್ಷಯಂ ಯೌವನಂ ।*
*ಪ್ರತ್ಯಾಯಾಂತಿ ಗತಾ ಪುನರ್ನ ದಿವಸಾ ಕಾಲೋ ಜಗದ್ಭಕ್ಷಕ: ॥*

(ಆಯುಷ್ಯ ತೀರುತ್ತಿದೆ, ತಾರುಣ್ಯ ದಿನ ಕಳೆದಂತೆ ಕ್ಷಯಿಸುತ್ತಿದೆ, ಕಳೆದ ದಿನಗಳು ಮತ್ತೆ ಬಾರವು. ಕಾಲನು ಜಗತ್ತನ್ನೇ ನುಂಗುವನು.) ಈ ನುಡಿಯ ಭಾವಾನುವಾದದಂತೆ ಇದೆ "ಹೋಗುತಿಹುದು ಕಾಯಾ." ಎಂಬ ಪದ. ಆಹಾರ–ನಿದ್ರಾ–ಭಯ–ಮೈಥುನಗಳೆಂಬ ಪ್ರಾಣಿಸಹಜವರ್ತನೆಯಲ್ಲಿ ಜನ್ಮಗಳೇ ಕಳೆಯುತ್ತವೆ. ಏನನ್ನೂ ತಿಳಿಯದೆ, ಸಾಧಿಸದೆ ದೇಹ ಮುದಿಯಾಗುತ್ತಿದೆ. ಜೀವನ ಅನುಭವ ವ್ಯರ್ಥವಾಗುತ್ತಿದೆ. ಪಾಪ–ಪುಣ್ಯಗಳ ಸಂಪಾದನೆ, ಅದರ ಫಲವನ್ನು ಉಣ್ಣುವುದು, ಇಷ್ಟರಲ್ಲೇ ಆಯುಸ್ಸು ಕಳೆದರೆ, ಜ್ಞಾನವನ್ನು ಎಂದು ಪಡೆಯುವೆ? ಎಂತು ಪಡೆಯುವೆ? ಛೀ ಹುಚ್ಚ ಮರುಳ ಎಂದು ಶರೀಫರು ಬೇಜವಾಬ್ದಾರಿಯ ಮನುಜನನ್ನು ಚುಚ್ಚಿದ್ದಾರೆ. ಇನ್ನಷ್ಟು ಸ್ಪಷ್ಟವಾಗಿ ನೀಡಿದ ನಿರ್ದೇಶನ ಇಲ್ಲಿದೆ.

*ದಿನದಿನಕೆ ಆಯುಷ್ಯ ಕ್ಷೀಣವು*
*ತನಗೆ ಪ್ರಾಯವು ಹೋಗುವದು ನಿಜ*
*ತನುವನಾಕ್ಷಣ ಭಕ್ಷಿಸುವ ಕಾಲನು, ಲಕ್ಷ್ಮೀ ಸ್ಥಿರವಲ್ಲಾ ।*
*ಇನಿತು ತೋಯತರಂಗ ಪರಿಯಲಿ .*
*ಯೆನಗೆ ತೋರಿತು ಮಿಂಚಿನಂದದಿ*
*ನಿನಗೆ ಶರಣನು ಹೊಕ್ಕು ಬಂದೆನು ಜೀವಭ್ರಮೆ ಬಿಡಿಸೋ ॥*

ಪ್ರಭುಸಂಮಿತದಂತೆ ನೇರವಾಗಿ – *ಜೀವಭಾವದೊಳಿದ್ದು ಮಾಯದೊಳಗೆ ಬಿದ್ದು*

*ಸಾವಿಗಂಜುತ ಬಾಯಿ ಬಿಡಬ್ಯಾಡಿರೋ*
*ಆಯು ತೀರದ ಮುಂಚೆ ಜೀವಪರಮರಿದ್ದ*
*ಠಾವ ಹುಡಿಕಿ ದೇವರ ಕೂಡಿರೋ।*
*ಹಸು ತೃಷೆ ವ್ಯಸನಕ್ಕೆ ಹರಿಯುವ ಮನಸಿನ*
*ಕಸುರು ಕಳೆದು ನಿರ್ಮಲರಾಗಿರೋ।* *(220)*

ಸಮಸ್ತಮಾನವರ ಮೇಲೆ ಅನುಕಂಪದಿಂದ ನೀಡಿದ ಕರೆಯಂತೆ ಈ ಹಾಡು ಇದೆ. ಯಥಾರ್ಥವಾಗಿ ಸರ್ವಸ್ವತಂತ್ರನಾದ ಆತ್ಮನು ಜೀವಭಾವದಿಂದ, ದೇಹಭಾವದಿಂದ ಬಳಲುತ್ತಾನೆ. ಆದಕ್ಕೆ ಕಾರಣ ಮಾಯೆ, ಅಂದರೆ ಅಜ್ಞಾನ. ಚಿಕ್ಕದಾದ ಮೋಡ ದೊಡ್ಡದಾದ ಸೂರ್ಯಬಿಂಬವನ್ನೇ ಮರೆಯಿಸಿ ಕತ್ತಲು ಮುಸುಕುವಂತೆ ಮಾಡುತ್ತದೆ. ಹಾಗೆಯೆ ಕಿಂಚಿತ್ತಾದ ಅಜ್ಞಾನವು ವ್ಯಾಪಕನಾದ ಆತ್ಮನನ್ನು ಮರೆ ಮಾಡುತ್ತದೆ. ಇದನ್ನು **"ಆವರಣ ಶಕ್ತಿ"** ಎಂದು ವೇದಾಂತದಲ್ಲಿ ಕರೆದಿದ್ದಾರೆ. ಆದಕ್ಕಾಗಿ ಶರೀಫರು **'ಮಾಯದೊಳಗೆ ಬಿದ್ದು ಸಾವಿಗಂಜುತ'** ಎಂದು ಉಲ್ಲೇಖಿಸುತ್ತಾ ಅಜ್ಞಾನದ ಪ್ರಭಾವವನ್ನು ಸೂಚಿಸುತ್ತಾರೆ. ಹಸ್ತಾಮಲಕಾಚಾರ್ಯರು ಬರೆದಿರುವಂತೆ –**"ಬದ್ಧವದ್ ಭಾತಿ ಯೋ ಮೂಢ ದೃಷ್ಟೇಃ"**(ಮೋಹಮುಸುಕಿದ ದೃಷ್ಟಿಯ ವ್ಯಕ್ತಿ ತನ್ನನ್ನು ತಾನೇ ಬದ್ಧನೆಂದು ಭಾವಿಸುತ್ತಾನೆ). ಹೊಟ್ಟೆಪಾಡಿಗಾಗಿ, ದೇಹಮನಸ್ಸುಗಳ ಸುಖಕ್ಕಾಗಿ ನಿರಂತರ ಒದ್ದಾಟ ಮಾಡುತ್ತಾನೆ ಮನುಷ್ಯ. ಅಷ್ಟರಲ್ಲೆ ಜೀವನ ಕೊನೆಯಾಗುತ್ತದೆ. ಆದಕ್ಕಾಗಿ ಬದುಕು ಮುಗಿವ ಮುನ್ನ, ಹುಟ್ಟಿನಂತೆಯೇ ಪ್ರಕೃತಿ ಸಹಜವಾದ ಸಾವು ಬರುವ ಮುನ್ನ ಜೀವ –ದೇವರ ಐಕ್ಯದ ಸ್ಥಾನ ಕಂಡುಕೊಂಡು ಪರಮಾತ್ಮನಲ್ಲಿ ಲೀನವಾಗಬಾರದೇ ಎಂದು ಹಂಬಲಿಸುತ್ತಾನೆ.

ಯಾಕಾಗಿ ಮಾನವ ಜೀವವೆತ್ತುತ್ತಾನೆ? ಜೀವನದ ಗುರಿಯೇನು? ಬದುಕಿನ ಕ್ರಮವೇನು? ಎಂದೆಲ್ಲಾ ಚಿಂತಿಸದೆ, ಅದು ಬೇಕು, ಇದು ಬೇಕು, ಎಲ್ಲ ಬೇಕು ಎಂದು ಬಯಸುವುದೇ ಜೀವನವೇ?

*ಹಲವು ಯೋಚನೆಗಳಿಂದ ಬಳಲುವುದೇನೇನೆಲವೊ*
*ಧರೆಯೊಳುದಿಸಿ, ಧರ್ಮಗಳಿಸದೆ*
*ನಾರಿಗೆ ಮರುಳಾಗಿ, ಶಿವನಾಮ ಸ್ಮರಿಸದೆ*
*ಕಾದು ಕರಣಂಗಳ ನ್ಯಾಯ ತೀರದ ಮುಂಚೆ*
*ಮಾಯದೊಳು ಬಿದ್ದು ಹರಿದಾಡಗೊಡದೆ ।* *(222)*

ಎನ್ನುತ್ತಾ ಮಾನವನ ಮೌಢ್ಯದ ಪರಿಯನ್ನು ನಿಂದಿಸಿದ್ದಾರೆ.

ವೇದಾಂತಶಾಸ್ತ್ರಗಳಲ್ಲಿ ಉಕ್ತವಾದ ನಿತ್ಯಾನಿತ್ಯವಸ್ತುಗಳ ವಿವೇಕವನ್ನು ಹಾಗೂ ಇಹಾಮುತ್ರಾರ್ಥಫಲಭೋಗಗಳಲ್ಲಿ ಹೊಂದಿರಬೇಕಾದ ವೈರಾಗ್ಯವನ್ನು ಬಹಳಷ್ಟು ಸರಳವಾಗಿ ಜನಮನ ಮುಟ್ಟುವಂತೆ ಶರೀಫರು ನಿರೂಪಿಸಿದ್ದಾರೆ. ಪಂಡಿತರ ಮಾತೆಂಬ ಕಬ್ಬಿಣದ ಕಡಲೆಯನ್ನು

ತರ್ಕ ಕರ್ಕಶತೆಯಿಲ್ಲದೆ ಜನಸಾಮಾನ್ಯರಿಗೆ ತಿಳಿಯಪಡಿಸಿದ್ದಾರೆ. ಸಂಗ್ರಹಬುದ್ಧಿಯ ಜನರು ಆಸ್ತಿ-ಪಾಸ್ತಿ, ಧನ-ಕನಕ, ಮಡದಿ-ಮಕ್ಕಳು, ಕೀರ್ತಿ-ಉನ್ನತಿಗಳನ್ನು ಸಂಪಾದಿಸುವಲ್ಲಿ ಮೈಮರೆತು ಬಿಡುತ್ತಾರೆ. ಕೊನೆಗೆ ಮರಣ ಸಮೀಪಿಸಿದಾಗ ಸಮಯ ವ್ಯರ್ಥವಾಯಿತು, ಸರ್ವವೂ ವ್ಯರ್ಥವಾಯಿತು ಎಂಬ ಅರಿವು ಕೂಡ ಎಷ್ಟೋ ಬಾರಿ ಮೂಡುವುದಿಲ್ಲ. '**ಮಂಚಬಾರದು, ಮಡದಿಬಾರಳು, ಕಂಚು ಕನ್ನಡಿಬಾರದು**' ಎಂದು ಹರಿದಾಸರು ಹಾಡಿದಂತೆ, ಶರೀಫರು ಮತ್ತೆ ಮತ್ತೆ ಎಚ್ಚರಿಸುತ್ತಾರೆ. ವಾಸ್ತವವನ್ನು ವಿಚಾರಿಗಳ ಮುಂದಿಡುತ್ತಾರೆ.

*ನೀ ಮಾಡೋದು ಗಳಿಗಿ ಸಂತಿ*
*ಮೇಲ್‌ಮಾಳಿಗಿ ಕಟ್ಟಬೇಕಂತಿ*
*ಆನೆಅಂಬಾರಿ ಏರಬೇಕಂತಿ*
*ಮಣ್ಣಲ್ಲಿ ಇಳಿಯೂದ ತಣ್ಣಗ ಮರೆತಿ।*
*ಬದುಕು ಬಾಳೇವು ನಂದೇ ಅಂತಿ*
*ನಿಧಿಯು ಸೇರಿದಷ್ಟು ಸಾಲದುಅಂತಿ*
*ಕದವ ತೆರೆದು ಕಡೆಯಾತ್ರೆಗೆ ನಡೆವಾಗ*
*ಒದಗದು ಯಾವುದು ಸುಮ್ಮನೆ ಕುಂತಿ   (225)*

ಅಹಂಕಾರ-ಮಮಕಾರಕ್ಕೆ ಕಾರಣವಾಗುವ ಸಕಲ ವಸ್ತುಗಳನ್ನು, ಸುಖಭ್ರಾಂತಿಯನ್ನು ತೊಲಗಿಸುವ ಅವಶ್ಯಕತೆಯನ್ನು ತಿಳಿಯುವುದು ಮೊದಲು, ಅಂತೆಯೇ ನಡೆದು ಕೊಳ್ಳುವುದು ಮತ್ತಿನದು. ಸಾಧನೆಯ ಪ್ರಥಮ ಹಂತ ಇದೇ. ಮನುಷ್ಯನ ಸಂಕಲ್ಪದ ದೃಢತೆಯ ಪರೀಕ್ಷೆ ಆರಂಭವಾಗುವುದು ಇಲ್ಲೇ. ಇಷ್ಟವೆಂದು, ಸುಖವೆಂದು ಈವರೆಗೆ ಭಾವಿಸಿದ್ದೆಲ್ಲವೂ ಹೇಯ (ತ್ಯಜಿಸಬೇಕಾದ್ದು) ಎಂದು ನಿರ್ಧರಿಸುವುದು ಕಷ್ಟದ ಕೆಲಸ. ಹಾಗೆ ತಿಳಿದರೂ, ಯಥಾರ್ಥವಾಗಿ ಬಿಡುವುದು ಇನ್ನೂ ಕಷ್ಟ. ಪೂರ್ವದ ಅಭ್ಯಾಸದಿಂದ ಉಂಟಾದ ಸಂಸ್ಕಾರದಿಂದ, ಉಳಿದ ವಾಸನಾಬಲದಿಂದ ಎದುರಾಗುವ ಹಲವು ಅಡ್ಡಿಗಳನ್ನು ನಿವಾರಿಸಿಕೊಳ್ಳುವುದು ಅಗತ್ಯ. ಅದಕ್ಕಾಗಿ ವೇದಾಂತದಲ್ಲಿ ಶಮಾದಿ ಸಂಪತ್ತನ್ನು ಬೆಳೆಸಿಕೊಳ್ಳಲು ನಿರ್ದೇಶಿಸಲಾಗಿದೆ.

### ೩.೩. ಆಧ್ಯಾತ್ಮ ಚಿಂತನ ಪ್ರವೃತ್ತಿಗೆ ಒದಗುವ ತಡೆಗಳು

ಕಣ್ಣು, ಕಿವಿ ಮುಂತಾದ ಜ್ಞಾನೇಂದ್ರಿಯಗಳು, ಮಾತು, ಕೈ,ಕಾಲು ಮುಂತಾದ ಕರ್ಮೇಂದ್ರಿಯಗಳು ಮತ್ತು ಮನಸ್ಸು ಮನುಷ್ಯನ ಸುಖ-ದು:ಖಗಳೆಂಬ ದ್ವಂದ್ವದ ಅನುಭವದ ದ್ವಾರಗಳು. ಅವುಗಳ ಮೂಲಕ ಸುಖ ಪಡೆದಾಗ, ಸುಖಕಾರಣವಾದ ವಸ್ತುವಿನ ಬಗ್ಗೆ ರಾಗ ಉಂಟಾಗುತ್ತದೆ. ಅದೇ ದು:ಖ ದೊರೆತಾಗ, ದು:ಖಕಾರಣವಾದ ವಸ್ತುವಿನ ಬಗ್ಗೆ ದ್ವೇಷವು ಹುಟ್ಟುತ್ತದೆ. ಮನುಷ್ಯ ಈ ದ್ವಂದ್ವಗಳ ನಡುವೆ ಲೋಲಕದಂತೆ ಭ್ರಮಿಸುತ್ತಾ ಇರುತ್ತಾನೆ. ಮಾತ್ರವಲ್ಲ, ಶ್ರೋತ್ರ-ನೇತ್ರಾದಿ ಇಂದ್ರಿಯಗಳು ತಮಗೆ ಸಂಬಂಧಿಸಿದ ಶಬ್ದ-ರೂಪಾದಿ ವಿಷಯಗಳಲ್ಲಿ ಆಸಕ್ತವಾಗಿ ಚಪಲತೆಯನ್ನು

ಪ್ರದರ್ಶಿಸುತ್ತದೆ. ಆದರೊಂದಿಗೆ ಕಾಮ-ಕ್ರೋಧ ಎಂಬುದಾಗಿ ಗುರುತಿಸಲ್ಪಟ್ಟ ಆಂತರ್ಯದ ಆರು ಶತ್ರುಗಳು ಕಾಡಿಸುತ್ತವೆ. ಬಾಹ್ಯಜಗತ್ತಿನ ಹಾಗೂ ಆಂತರಿಕಗುಣ-ಸ್ವಭಾವಗಳ ದೆಸೆಯಿಂದ ಜೀವನದಲ್ಲಿ ಗೊಂದಲ ಎದುರಾಗುತ್ತದೆ. ಈ ರೀತಿಯ ಬಹುಪ್ರಕಾರದ ಚಾಂಚಲ್ಯಗಳೆಲ್ಲ ನಿವಾರಣೆಯಾಗಿ ಸ್ಥಿರತೆ ಮೂಡಿದರಷ್ಟೇ ಆತ್ಮ ಚಿಂತನೆಗೆ ಆಸ್ಪದವಾದೀತು.

ಧೂಳು ಮುಸುಕಿದ್ದರೆ ಎಷ್ಟೇ ಒಳ್ಳೆಯ ಕನ್ನಡಿಯಾದರೂ ಪ್ರತಿಫಲಿಸುವುದಿಲ್ಲ. ಧೂಳು ಕಳೆದು ಸ್ವಚ್ಛವಾದಾಗ ಪ್ರತಿಬಿಂಬ ಸ್ಫುಟವಾಗಿ ತೋರುತ್ತದೆ. ಅದೇ ಬಗೆಯಲ್ಲಿ ದೇಹ-ಕರಣ - ನಡೆ-ನುಡಿ-ಚಿಂತನಗಳು ಕೊಳೆ ಕಳೆದುಕೊಂಡು ನಿರ್ಮಲವಾದಾಗ ಅರಿವು ತಾನಾಗಿ ಬೆಳಗುವುದು. ಮಹರ್ಷಿಪತಂಜಲಿ ತಿಳಿಸಿದಂತೆ ಅಶುದ್ಧಿಕ್ಷಯೇ . . . ಜ್ಞಾನದೀಪ್ತಿ . . . ।, ಶಮ =ಮನೋನಿಗ್ರಹ, ದಮ=ಇಂದ್ರಿಯ ನಿಯಂತ್ರಣಗಳನ್ನು ಸಾಧಿಸಬೇಕು. ಸ್ವಭಾವದಿಂದ ಚಂಚಲವಾದ ಮನವನ್ನು ಹಿಡಿದು ನಿಲ್ಲಿಸುವುದಕ್ಕೆ ಮೊದಲ ಆದ್ಯತೆ. ಮನವು ನಿಗೃಹೀತವಾದಾಗ ಇಂದ್ರಿಯಗಳ ಸುಖಾಪೇಕ್ಷೆಗೆ ಕಡಿವಾಣ ಹಾಕುವುದು ಸುಲಭ. ಕಾಮ-ಕ್ರೋಧಗಳನ್ನು ನಿಯಂತ್ರಿಸುವುದು ಕೂಡಾ ಸುಲಭ. ಈ ವಿಚಾರದಲ್ಲಿ ಶರೀಫರ ಅಭಿಪ್ರಾಯ ಹೀಗೆ -

*ಹೊತ್ತುಗಳೆಯದಿರಲೋ ಮನವೇ*
*ಗೊತ್ತು ಇಲ್ಲದೆ ನೀನು ಬರಿದೆ*
*ಚಂಚಲನಾಗಿ ಚರಿಸ್ಯಾಡುತ್ತ ನಾನಾ ವಿಷಯಗಳನು*
*ಹೊತ್ತು ಶ್ರಮದೊಳಾಡಬೇಡ । ( 92)*

ಈ ಪದದಲ್ಲಿ ಚಿತ್ತವಿಕ್ಷೇಪವನ್ನು ಸೂಚಿಸಿದ್ದಾರೆ. ಗೊತ್ತುಗುರಿಗಳಿಲ್ಲದೆ, ಬೇಕು - ಬೇಡಗಳನ್ನು ಗಣಿಸದೆ ತಿರುಗಾಡುವ ಮನಸ್ಸಿನ ಸ್ವರೂಪವನ್ನು ವಿವರಿಸಿದ್ದಾರೆ. ಅದನ್ನು ತಡೆಯುವ ವಿಧಾನ -

*ಹರಿದಾಡುವ ಮನಸಿಗೆ ಮೊಚ್ಚೆ*
*ಮೊಚ್ಚೆಲ್ಹೊಡೆದು ನಿಲ್ಲಿಸು ಜಾಣ ।*

ಜಾಣನೇ ಹೌದಾಗಿದ್ದರೆ, ಕಠೋರವಾಗಿ ವರ್ತಿಸಿ ನಿಷ್ಠುರತೆಯಿಂದ ಮನವ ಬಿಗಿಹಿಡಿ. ಚಪ್ಪಲಿ ಏಟಿನಂತೆ ಇರಬೇಕು ಆ ಯತ್ನ. ಮನವು ತತ್ಕ್ಷಣ ತನ್ನ ಚಂಚಲತೆ ಬಿಡಬೇಕು.

*ಕಡು ವಿಷಯದಿ ಸಂಸಾರಕೆ ಮರುಗುತ*
*ಪೊಡವಿ ತಳದಿ ಮಿಡಿಕ್ಯಾಡುವ ಮನಸಿಗೆ*
*ಮೊಚ್ಚೆಲ್ಹೊಡೆದು ನಿಲ್ಲಿಸು ಜಾಣ ।*

*ಸಿರಿಸಂಪತ್ತು ಸೌಭಾಗ್ಯ ತನಗೆ ಬಲು*
*ಪಿರಿದಾಗಲಿ ಬೇಕೆಂಬುವ ಮನಸಿಗೆ*
*ಮೊಚ್ಚೆಲ್ಹೊಡೆದು ನಿಲ್ಲಿಸು ಜಾಣ ।*

*ವಸುಧಿಯೊಳಗೆ ಶಿಶುನಾಳಧೀಶನ*
*ಹೆಸರು ಮರೆತು ಕೊಸರ್ಯಾಡುವ ಮನಸಿಗೆ*
*ಮೊಚ್ಚಿಲ್ಹೊಡೆದು ನಿಲ್ಲಿಸು ಜಾಣ । (೯೪)*

ಮನೋರಥಗಳಿಗೆ ಸಮಾಪ್ತಿಯಿಲ್ಲ. ಬೇಕು, ಇನ್ನೂ ಬೇಕು, ಮತ್ತೂ ಬೇಕು ಎನ್ನುವ ಮನಸ್ಸಿಗೆ ಮೊಚ್ಚೆಯಲ್ಲಿ ಹೊಡೆದೇ ನಿಲ್ಲಿಸಬೇಕು. ಮೃದುಪ್ರಯತ್ನದಿಂದ ಮನಶ್ಚಾಂಚಲ್ಯ ನೀಗದು.* ಜಾಗೃತ ಅವಸ್ಥೆಯಲ್ಲಿ ಎಲ್ಲೆಡೆ ಸಂಚರಿಸಿ, ಇಂದ್ರಿಯಗಳನ್ನು ವಿಷಯಾಸಕ್ತಿಯಿಂದ ಬಳಲಿಸುವ ಮನಸ್ಸು, ಸ್ವಪ್ನಾವಸ್ಥೆಯಲ್ಲೂ ಸುಮ್ಮನಿರದು. ಕನಸು ಕಾಣುವಂತೆ ಮಾಡಿ ಸುಖ, ದುಃಖ, ಭಯಗಳ ಭ್ರಮೆಯನ್ನು ಅನುಭವಿಸುವಂತೆ ಮಾಡುತ್ತದೆ.

*ನಿದ್ದೆ ಹತ್ತಿ ಮಲಗಿರ್ದ ಕನಸಿನೊಳು*
*ಗದ್ದಲಿಸುವ ಗುಣಗೇಡಿ ಮನವೇ*
*ಬಲುವಿಷಯಗಳಲಿ ಬಳಲಿಸಿ ತನುತ್ರಯದೊಳಗೆ*
*ಹೊರಗೆ ಸುಳಿದಾಡುವ ಮನವೆ । (೯೭)*

ನಾನಾವಿಷಯಗಳಲ್ಲಿ ತೊಡಗಿ ಚಂಚಲತೆ ತೋರುವ ಮನ ಕೆಲವೊಮ್ಮೆ ಒಂದನ್ನೇ ಹಿಡಿದು ಚಿಂತೆಗೆ ಕೂರುತ್ತದೆ. ಬೇಡವೆಂದರೂ ಅದನ್ನೇ ಚಿಂತಿಸುತ್ತದೆ. ಚಿಂತೆಗೂ ಚಿತೆಗೂ ವ್ಯತ್ಯಾಸ ಹೆಚ್ಚಿಲ್ಲ. ಚಿತೆಯು ಹೆಣವನ್ನು – ನಿರ್ಜೀವ ಶರೀರವನ್ನು ಸುಟ್ಟರೆ, ಚಿಂತೆ ಸಜೀವ ಶರೀರವನ್ನು ದಹಿಸುತ್ತದೆ. ತನ್ನಿಷ್ಟ ಬಂದಂತೆ ವಿಚಲ =ಅಚಲ ಭಾವವನ್ನು ಹೊಂದುವ ಮನಸ್ಸಿಗೆ ಛೀ ಎನ್ನುತ್ತಾರೆ ಶರೀಫರು.

*ಘೋರಚಿಂತಾಸಾಗರ ದೊಳು ಮುಳುಗಿ*
*ಪಾರಗಾಣದ ಛೀಮಾರಿ ಮನವೆ ।*
*ಕಣ್ಣು ಮುಚ್ಚಿ ಕೈಕಾಲುಗಳಾಡದೆ*
*ತಣ್ಣಗೆ ಪವಡಿಸಿ ಕುನ್ನಿಯ ಮನವೆ । (೯೭)*

ಭಗವದ್ಗೀತೆಯಲ್ಲಿ ಶ್ರೀಕೃಷ್ಣನು ಬಂಧ–ಮೋಕ್ಷಗಳಿಗೆ ಮನವೇ ಕಾರಣ ಎಂದಿದ್ದಾನೆ. ಕಣ್ಣಿಗೆ ಕಾಣದ ಮನಸ್ಸಿನ ವರ್ತನೆ ವಿಚಿತ್ರ. ಹೊರಗಿನ ವೇಷ–ಭಾಷೆಗಳಿಗೂ, ಒಳಗಿನ ಮನದ ನಡತೆಗೂ ಎಷ್ಟೋ ಬಾರಿ ಸಂಬಂಧವಿರುವುದಿಲ್ಲ. ಅಂತಹ ಆಚಾರ ಭ್ರಷ್ಟತೆಯನ್ನು ವಿಚಾರಹೀನತೆಯನ್ನು ನಿಷ್ಠುರವಾಗಿ ಶರೀಫರು ಟೀಕಿಸುತ್ತಾರೆ. ಮಾತಿಗೂ ಮನಸಿಗೂ ಇರುವ ಅಂತರ, ಕಲಹಪ್ರಿಯತೆ, ಅಹಂಕಾರ, ಪರಾರ್ಥದಲ್ಲಿ ಅಭಿಲಾಷೆ, ಲಾಭದ ಲೋಭದಿಂದ ಪರರ ಪ್ರಶಂಸೆ ಗೈಯುವುದು, ತಿಳಿದೂ ತಿಳಿಯದಂತೆ ವರ್ತಿಸುವುದು, ಶಾಸ್ತ್ರವನ್ನೋದಿಯೂ ಸಂಸಾರಬದ್ಧನಾಗುವುದು, ಮುಂತಾದ ದುರ್ಗುಣಗಳನ್ನು ಸ್ಪಷ್ಟವಾಗಿ ನಿಂದಿಸುತ್ತಾರೆ. ಶರೀಫರ ಪ್ರಭಾವಿಪದಗಳಲ್ಲಿ ಇದೂ ಒಂದು.

*ಬಾಯಿಲೆ ಬ್ರಹ್ಮನ ಬೊಗಳಿದರೇನೋ, ಛೀ*
*ನಾಯಿ ಜನ್ಮಕೆ ಬಿದ್ದು ಹೊರಳುವ ಮನಸೇ ।*

*ಕಾಯ ಜೀವರೊಳು ನ್ಯಾಯವ ಬೆಳೆಸಿ*
*ಮಾಯದೊಳಗೆ ಮುಳುಗೇಳುವ ಮನಸೇ ।*

*ಪರಸ್ತ್ರೀ ಪರಧನ ಪರನಿಂದ್ಯದಿ ನೀನು*
*ಪರಸ್ತುತಿಯಲಿ ದಿನಗಳಿಯುವ ಮನಸೇ ।*

*ವರಶಾಸ್ತ್ರಗಳೋದಿ ಅರಗಿಳಿಯಂದದಿ*
*ನೆರೆ ಸಂಸಾರ ಪಂಜರದಿ ತೊಳಲುವ ಮನಸೇ।*

*ಹೊಲಸಿನ ಸುಂಬಳ ಸೇವಿಪ ನೊಣದಂತೆ*
*ತಿಳಿಯದೆ ವಿಷಯದಿ ಬೀಳುವಿ ಮನಸೇ।*

*ಇಳೆಯೊಳು ಶಿಶುನಾಳಧೀಶನ ಒಲಿಸದೆ*
*ಬಲು ಕರ್ಮವ ಗಳಿಸುವಿಯೋ ಮನಸೇ ।  (೯೯)*

ಸಿಂಬಳದಿ ಬಿದ್ದ ನೊಣದ ದೃಷ್ಟಾಂತವಂತೂ ಅಸಮಾನವಾದ ಹಾಗೂ ಅತ್ಯಂತ ಸಾರ್ಥಕವಾದ ಉಪಮೆ. ದೀಪಶಲಭವಾದರೆ ಕೂಡಲೇ ದಹಿಸಿಹೋಗುತ್ತದೆ. ಆದರೆ ನೊಣ ಅದೇ ಸ್ವರ್ಗವೆಂದು ಭಾವಿಸುತ್ತ, ಸ್ವೇಚ್ಛೆಯಿಂದ ಇದ್ದೇನೆ ಎಂದು ತಿಳಿಯುತ್ತ, ಬಿಡಿಸಿಕೊಳ್ಳಲಾಗದ ಅಂಟಿನ ನಂಟಿನಲ್ಲಿ ಸಿಕ್ಕಿರುತ್ತದೆ.

*ಮನವೆಂಬೋ ಹೆಣ್ಣಿನ ಕಣ್ಣಸನ್ನೆಗೆ ಕಾಮ*
*ತಾನು ದೇಹದೊಳು ಸುಳಿದಾಡುತಿರೆ ।  (೧೦೩)*

ಎಂಬ ಪದಪಂಕ್ತಿಯು ಮನಸ್ಸೇ ಕಾಮದ ಹಾಗೂ ಅದರ ಉಪಲಕ್ಷಣಾರ್ಥದಲ್ಲಿ ಕ್ರೋಧ, ಲೋಭ, ಮದ, ಮತ್ಸರ, ಮೋಹಗಳಿಗೆ ತವರುಮನೆ ಎಂದು ಸೂಚಿಸುತ್ತದೆ. ಮನ್ಮಥನ ಹೆಸರುಗಳಾದ ಮದನ, ಸ್ಮರ, ಮನೋಜ, ಸಂಕಲ್ಪಯೋನಿ ಇವೆಲ್ಲ ಮನೋಮೂಲವಾಗಿಯೇ ಬಂದಿವೆ ಎಂದು ಗಮನಿಸಬಹುದು. ಮನವು ಕಾಮವಶವಾದಾಗ, ದೇಹವೂ ಅದಕ್ಕನುಸಾರವಾದ ಚೇಷ್ಟೆಗಳಿಗೆ ತೊಡಗುತ್ತದೆ.

ಆಸೆ ಪಡುವುದು ಮನದ ಒಂದು ಲಕ್ಷಣ. ಅದು ಮಿತಿ ಮೀರಿದಾಗ ಮನುಷ್ಯ ಪತನ ಹೊಂದುತ್ತಾನೆ. ಆಶೆಗೆ ದಾಸರಾದವರು ಲೋಕಕ್ಕೆ ದಾಸರಾಗುತ್ತಾರೆ. ಆಶೆಯನ್ನು ಬಗ್ಗಿಸಿ ದಾಸಿಯಂತೆ ನಿಯಮಿಸಿದ ಜನರಿಗೆ ಲೋಕವೇ ದಾಸವಾಗುತ್ತದೆ.[8] ಈ ಕಾರಣದಿಂದ ಸರ್ವಸಂಗ ಪರಿತ್ಯಾಗಿಗಳಾದ, ಅಹಂ-ಮಮಭಾವಗಳನ್ನು ತೊರೆದ, ನಿರಪೇಕ್ಷಿಗಳಾದ ವಿರಕ್ತರಿಗೆ, ಸಂನ್ಯಾಸಿಗಳಿಗೆ, ಯತಿಗಳಿಗೆ

ಲೋಕವೆಲ್ಲ ಶರಣಾಗುತ್ತದೆ, ಗೌರವ ನೀಡುತ್ತದೆ. ಹಾಗಾಗಿ ಆಸೆಯನ್ನು ವರ್ಜಿಸುವಂತೆ ಶರೀಫರು ಉಪದೇಶಿಸುತ್ತಾರೆ.

*'ಈಸಲಾಗದು ಮನಸೆ ಆಸೆಯ ನದಿಯೊಳು' ಎಂದೆಚ್ಚರಿಸುತ್ತಾರೆ.*

*ಹೇಸಬಾರದೇ ಮನಸೆ ನೀ ಹೇಸಬಾರದೆ*
*ಆಸೇದ ನದಿಯೊಳ್ ಈಸ್ಯಾಡುವುದಕೆ ।*
*ಭೂಮಿಗುದಿಸಿ, ಭವದ ಮಹಾಕರ್ಮದಿ*
*ಮರಳಿ ಮಾಯಾ ಮೋಹಕೆ ಮೋಹಿಸದೆ ।   (೧೦೦)*

ಈ ಪದ ವಿಷ್ಣುಪುರಾಣದ ಸೌಭರಿಋಷಿಯ ವೃತ್ತಾಂತವನ್ನು ನೆನಪಿಸುತ್ತದೆ. ನೀರೊಳಗೆ ತಪಸ್ಸು ಮಾಡುತ್ತಿದ್ದ ಸೌಭರಿ, ಹನ್ನೆರಡು ವರ್ಷಗಳ ಅಂತ್ಯದಲ್ಲಿ ಎಚ್ಚರ ಹೊಂದಿದಾಗ ಮೀನುಗಳ ಸಂಸಾರ ನೋಡುತ್ತಾನೆ. ಆ ಜಂತುಗಳ ಸುಖದಿಂದ ಪ್ರಚೋದಿತನಾಗಿ ತಾನೂ ಸಂಸಾರಿಯಾಗುವ ಸಂಕಲ್ಪ ಮಾಡುತ್ತಾನೆ. ಮಾಂಧಾತರಾಜನ ೫೦ ಕುಮಾರಿಯರನ್ನು ವಿವಾಹವಾಗಿ ಅವರ ಸುಖಸೌಲಭ್ಯಕ್ಕಾಗಿ ಕಾಡಿನಲ್ಲಿ ಐವತ್ತು ಮನೆಗಳನ್ನು ಕಟ್ಟಿಸುತ್ತಾನೆ. ಸಂತೋಷದಿಂದ ಜೀವಿಸುತ್ತ ೧೫೦ ಮಕ್ಕಳನ್ನು ಪಡೆಯುತ್ತಾನೆ. ಅವರ ಆಟ ಪಾಠಗಳನ್ನು ನೋಡುತ್ತ ಅವರಿಗೂ ವಿವಾಹಾದಿಗಳನ್ನು ಮಾಡಿಸಿ ಮೊಮ್ಮಕ್ಕಳನ್ನು ಮತ್ತೆ ಮರಿಮಕ್ಕಳನ್ನು ಪಡೆಯುತ್ತಾನೆ. ಸುಖಸಾಗರದಲ್ಲಿ ಮಗ್ನನಾಗಿದ್ದ ಸೌಭರಿಗೆ ಒಂದು ದಿನ **'ಅಯ್ಯೋ, ನನ್ನ ಮೋಹದ ವಿಸ್ತಾರವೇ! ಆಸೆಗಳನ್ನು ಪೂರೈಸಿ ಮುಗಿಯುವಂತೆ ಇಲ್ಲ'** ಎಂಬ ಜ್ಞಾನೋದಯವಾಗುತ್ತದೆ. ಎಲ್ಲವನ್ನು ತ್ಯಜಿಸಿ ತಪೋನಿಷ್ಠನಾಗಿ ಮುಕ್ತಿ ಹೊಂದುತ್ತಾನೆ. ಹೀಗಿದೆ ಮನಸ್ಸಿನ ಆಶಾಪಾಶದ ಮಹಿಮೆ.

ಶರೀಫರು ಪೂರ್ವದ ಉದಾಹರಣೆಯನ್ನು ನೀಡಿ ಕಾಮದ ಪ್ರಭಾವ ಅದೆಷ್ಟು ಬಲವತ್ತರ ಎನ್ನುತ್ತಾರೆ. ಸೂತ್ರರೂಪದಲ್ಲಿ ಕಾಮದ ವರ್ಜನೀಯತೆಯನ್ನು ಸ್ಪಷ್ಟ ಪಡಿಸುತ್ತಾರೆ.

*ಬೀಳಬಾರದೋ ಕೆಸರಿನೊಳು ಜಾರಿ ।*
*ಬ್ರಹ್ಮನು ಬಿದ್ದನು, ರಾಮನು ಗೆದ್ದನು*
*ರುದ್ರ ಒದ್ದಾಡಿದನು, ಕ್ಷುದ್ರನಾದನು ಸುರಪನು ।*
*ಸುರನರರೆಲ್ಲರು ಆರಲಿಗೆ ಮರುಳರು*
*ತರವಲ್ಲ ಸರಿದೋಗು ಅರುವಿನ ದಾರಿಯೊಳು ।   (224)*

ವಿಷಯಗಳೇ ತುಂಬಿರುವ ಜಗದಲ್ಲಿ ನೀರ ಮೇಲಿನ ಕಮಲದೆಲೆಯಂತೆ ನಿರ್ಲಿಪ್ತವಾಗಿರಬೇಕು. ಜಾರಿದರೆ ಅಪಾಯ ತಪ್ಪಿದ್ದಲ್ಲ. ದೇವತೆಗಳು ಅನುಭವಿಸಿದ ದುರವಸ್ಥೆಗಳನ್ನು ಸೂಚಿಸುತ್ತ, ಹುಲುಮನುಷ್ಯರ ಪಾಡು ಇನ್ನೇನು ಎಂದು ಶರೀಫರು ತಿಳಿಸುತ್ತಾರೆ. ಈ ಭಾವವನ್ನೇ ಇನ್ನೊಂದು ಬಗೆಯಲಿ ವಿವರಿಸುವ ಪದವಿದೆ.

*ಹುಚ್ಚುನಾಯಿ ಬಂದು ಕಚ್ಚುತಲಿದೆ ತಂಗಿ*
*ಎಚ್ಚರದಲಿ ದಾರಿ ಹಿಡಿದು ನಡೆ ।*

'ಹುಚ್ಚುನಾಯಿ' ಎಂಬ ರೂಪಕ ಅನ್ವರ್ಥಕವಾಗಿ ಉಪಯೋಗಿಸಲ್ಪಟ್ಟಿದೆ. ವಿಶ್ವಾಸಾರ್ಹವಾದ ನಾಯಿ ಹುಚ್ಚು ಹಿಡಿದರೆ ಯಜಮಾನನನ್ನೇ ಕಚ್ಚುವುದು ಅವನನ್ನು ಹುಚ್ಚನನ್ನಾಗಿ ಮಾಡುವುದು. ಕರಣತ್ರಯಗಳಲ್ಲಿ ಒಂದಾದ ಮನಸ್ಸು ನಿಯಂತ್ರಣದಲ್ಲಿದ್ದರೆ ಅತ್ಯಂತ ಉಪಕಾರಿ. ಅದೇ ಕಾಮಾದಿಗಳಿಂದ ಹುಚ್ಚೆದ್ದರೆ ಅದನ್ನು ಹಿಡಿಯಲಾಗದು. ಯಜಮಾನನ ಜೀವವನ್ನೆ ಸಂಕಷ್ಟಕ್ಕೆ ಸಿಲುಕಿಸುವುದು. ಆದ್ದರಿಂದ ಜೀವನದ ಹಾದಿಯಲ್ಲಿ ಎಚ್ಚರದಿಂದ ಸಾಗಬೇಕು.

*ಅಚ್ಯುತನೋಳ್ ಸೇರಿ ಅಜನ ತಲಿಗೆ ಹಾರಿ*
*ಹೆಚ್ಚಿನ ಋಷಿಗಳ ಕಚ್ಚಿ ಬೊಗಳುವದು॥*
*ಹರನ ಕಡಿದು ಕೈಯೊಳು ಕೊಡಿಸಿ ಕಪಾಲವ*
*ಭರದಿಂದ ಭಿಕ್ಷಕ್ಕೆ ತಿರಿದೂಡಿತಿದು ।*
*ಸುರಲೋಕಕ್ಹೋಗಿ ಇಂದ್ರನ ಶರೀರದಿ ಬಹು*
*ಪರಿಪರಿ ಛಿದ್ರವ ಮಾಡಿತಿದು॥ (೨॥೫॥)*

ಕಾಮ–ಕ್ರೋಧಗಳಿಗೆ ಬಲಿಯಾಗಿ ಅಜ–ಹರಿ–ಹರರೇ ಪೀಡೆಗೆ ಗುರಿಯಾಗಿದ್ದಾರೆ. ಬ್ರಹ್ಮ ತನ್ನ ಸೃಷ್ಟಿಯಾದ, ಆದ್ದರಿಂದ ಪುತ್ರೀಸಮಾನಳಾದ ವಾಣಿಯನ್ನು ಮದುವೆಯಾದ. ಅದನ್ನು ತಿಳಿದ ಶಿವ ಅವನ ತಲೆತರಿದ, ಕೈಕಚ್ಚಿದ ಬ್ರಹ್ಮಕಪಾಲ ಹಿಡಿದು ಭಿಕ್ಷುಕನಂತೆ ಊರೆಲ್ಲ ಅಡ್ಡಾಡಿದ. ಇಂದ್ರನು ಅಹಲ್ಯೆಯನ್ನು ಸಂಗಮಿಸಿ, ಗೌತಮನ ಶಾಪ ಪಡೆದು ಮೈಯೆಲ್ಲ ಕಣ್ಣು ಮಾಡಿಕೊಂಡ. ಋಷಿ ಮುನಿಗಳು ಅಪ್ಸರೆಯರ ಬಿಂಕ ಬಿನ್ನಾಣಗಳಿಗೆ ಮಾರು ಹೋಗಿ ಉಗ್ರತಪಸ್ಸನ್ನು ಕೈಬಿಟ್ಟರು. ಶರೀಫರ ಮಾತಿನ ಚಂದ ಮೆಚ್ಚತಕ್ಕದು.

*"ಇಳೆಯೊಳೆಲ್ಲರ ತೊಡೆಯ ಹಿಡಿಯುತ ಹಲ್ಲೊಳು*
*ತಳಮಳಗೊಳಿಸಿತು ಹುಚ್ಚಿಡಿಸಿ"*

ಅವರೆನ್ನದೆ, ಇವರೆನ್ನದೆ ಎಲ್ಲರಲ್ಲಿ ತೋರುವ ಕಾಮದ ಸರ್ವವ್ಯಾಪಕತೆಗೆ ತೋರುಗೈ ಈ ಮಾತು.

*ಯಾಕಾರ ಬಂದೆವೋ ಈ ಊರೊಳಗದ್ಭುತ*
*ಸಾಕಿದಾಕಳ ಕರವ ಕಡಿಯಿತಂತೆ!*
*ಜೋಕೆ, ಲಕ್ಷ್ಮೀಪುರಕ್ಹೋಗುವ ಮಾರ್ಗದಿ*
*ಬೇಕೆಂದಡ್ಡಗಟ್ಟಿ ನೆಗೆವುದಂತೆ ॥ (೨॥೫॥)*

ಜಾಗ್ರತೆಯಾಗಿ ಭದ್ರತೆಯಿಂದ ಇರುವವನನ್ನೂ ಕಾಮ ಗೆಲ್ಲುತ್ತದೆ. ಬ್ರಹ್ಮಚಾರಿಗಳ, ಸಂನ್ಯಾಸಿಗಳ ನಿಯಮವನ್ನು ಕೆಡಿಸುತ್ತದೆ. ನಿಷ್ಠುರವ್ರತ ಪಾಲಿಸುತ್ತ ಶ್ರೇಯಸ್ಸಿನ ಮಾರ್ಗದಲ್ಲಿ ನಡೆದಾಗಲೂ ಸಾಧಕನ ಸತ್ತ್ವ ಪರೀಕ್ಷಿಸುವಂತೆ ಮನದಲ್ಲಿ ಸುಪ್ತವಾಗಿ ಅಡಗಿದ ಕಾಮ-ಕ್ರೋಧಗಳು ಕೆರಳುತ್ತವೆ.ಋಷಿಗಳು ಅಪ್ಸರೆಯರಿಗೆ ಮರುಳಾಗುವುದು, ಸಿಟ್ಟಾಗಿ ಶಾಪಕೊಡುವುದು ಇದಕ್ಕೆ ದೃಷ್ಟಾಂತ. 'ಹಾವು ತುಳಿದೇನೆ' ಎಂಬ ಪದ ಶರೀಫರ ವೈಯಕ್ತಿಕಜೀವನದ ಘಟನೆಯನ್ನು ನಿರೂಪಿಸುತ್ತದೆ ಎಂಬ ಅಭಿಪ್ರಾಯ ಕೆಲವರದು.[9] ಆ ಕತೆ ಹೀಗಿದೆ. ಚೆಲುವಾದ ಹೆಣ್ಣೊಬ್ಬಳು ಶರೀಫರ ಸ್ನೇಹ ಬಯಸುತ್ತಾಳೆ. ಕಾರಡಗಿಶಾಲೆಯಲ್ಲಿ ಶಿಕ್ಷಕರಾಗಿದ್ದ ಅವರು ಊರಿಗೆ ಹಿಂತಿರುಗುವಾಗ ಕತ್ತಲು ಮುಸುಕಿತ್ತು. ರಾತ್ರಿಯ ಹೊತ್ತು ನಿರ್ಜನಪ್ರದೇಶ. ಎದುರಾದ ಚೆಲುವೆ ಬಯಕೆಯನ್ನು ವ್ಯಕ್ತಪಡಿಸುತ್ತಾಳೆ. ಶರೀಫರಿಗೆ ತಮ್ಮ ನುಡಿ-ನಡೆಗಳನ್ನು ಪರೀಕ್ಷೆಗೆ ಒಡ್ಡುವ ಸಂದರ್ಭ ಒದಗಿಬಂದಿತು. ಆಕೆಗೆ ವಿಷಾದವಾಗದಂತೆ, ತಿರಸ್ಕಾರದಿಂದ ಕೆರಳಿ ಇನ್ನೇನೋ ಮಾಡದಂತೆ, ತಮ್ಮಿಂದಲೂ ತಪ್ಪಾಗದಂತೆ ಉಪಾಯವಾಗಿ ಸಂತೈಸಿ ಪಾರಾದರು. ಲೋಕಾಂತ ಪರೀಕ್ಷೆಗಿಂತ ಏಕಾಂತ ಪರೀಕ್ಷೆ ಹೆಚ್ಚಿನದು. ಕಡಿಯುವ ನಾಯಿಯಿಂದ, ಕಚ್ಚುವ ಹಾವಿಂದ ತಪ್ಪಿಸಿಕೊಂಡರು ಶರೀಫರು. ಮಾರ್ಮಿಕ ಸನ್ನಿವೇಶ ಹೀಗೆ ನಿರೂಪಿತವಾಗಿದೆ

*ಹಾವು ತುಳಿದೇನೆ ಮಾನಿನಿ, ಹಾವು ತುಳಿದೇನೆ*
*ಹಾವು ತುಳಿದು ಹಾರಿನಿಂತೆ*
*ಜೀವ ಕಳವಳಿಸಿತೆ ಗೆಳತಿ।*
*ಕಾರಡಗಿ ಊರಹೊರಗೆ*
*ದಾರಿ ಕಟ್ಟಿ ತರುಬಿದಂಥ*
*ಘೋರ ತರದ ಉರಗ ಆದರ*
*ಕ್ವಾರಿ ಹಲ್ಲು ಮುರಿದೆ ತ್ವರಿತದಿ॥ (೨೬೪)*

ಹಾವು ಕಚ್ಚಿದರೆ ಅದರ ವಿಷ ರಕ್ತದೊಡನೆ ಬೆರೆತು ಏರತೊಡಗುತ್ತದೆ. ಪರಿಣಾಮ ಭೀಕರ. ಅಂತೆಯೇ ಕಾಮ ಸೇವಿಸಿದಂತೆ ವರ್ಧಿಸುತ್ತದೆ ಹೊರತು ಶಮನಗೊಳ್ಳುವುದಿಲ್ಲ.

*ಕತ್ತಲೊಳು ಬಂದು ಕಾಲಿಗೆ*
*ಸುತ್ತಿಕೊಂಡಿತು ಸಣ್ಣನಾಗರ।*

ಹಾವು ಕಾಮವಾಂಛೆಯ ಪ್ರತೀಕ. ಕತ್ತಲಲ್ಲಿ ಅಂದರೆ ಏಕಾಂತದಲ್ಲಿ ಅದರ ಚೇಷ್ಟೆಗಳಿಗೆ ಹೆಚ್ಚಿನ ಅವಕಾಶ. ಹಾಗಾಗಿ ಶರೀಫರ ಜೀವ ಏನು ಮಾಡಲಿ ಎಂದು ಕಳವಳಿಸುತ್ತದೆ. ಜಾಗೃತ ವಿವೇಕದಿಂದ, ದೇವರ ದಯದಿಂದ ಅವರು ಗೆಲ್ಲುತ್ತಾರೆ. ಧನ್ಯತೆಯಿಂದ, ಪಾರಾದ ಹೆಮ್ಮೆಯಿಂದ ಹೇಳುತ್ತಾರೆ.

*. . . ಹಾವಿನ ಶಿರವ ಮೆಟ್ಟಿದೆ ಶಿವನ ದಯದಿ।*

ಈ ಬಗೆಯಲ್ಲಿ ಇಂದ್ರಿಯಗಳು ವಿಷಯಪ್ರವೃತ್ತಿಯಿಂದ ವಿರಮಿಸುವ ಸ್ಥಿತಿಯನ್ನು **'ಉಪರತಿ'** ಎನ್ನುತ್ತಾರೆ.[೮]

ಪುನ:ಪುನ: ಹುಟ್ಟಿಬಂದು ದೇಹಭಾವದಿಂದ ವರ್ತಿಸುತ್ತಾ, ತಾಪತ್ರಯಗಳಿಂದ ಪ್ರಯಾಸ ಪಡುತ್ತ, ಜೀವನು ದಿಕ್ಕು ತಿಳಿಯದೆ ಅಲೆಯುತ್ತಾನೆ. ನಾನಾರು? ಎಲ್ಲಿಂದ ಬಂದೆ? ಕರ್ತವ್ಯವೇನು? ಹೋಗಬೇಕಾದ ಗಮ್ಯ ಯಾವುದು? ಮುಂತಾಗಿ ವಿಚಾರವಾಗಲಿ, ಕುತೂಹಲವಾಗಲಿ, ಅರಿವಾಗಲಿ ಇಲ್ಲದೆ ವಿಷಯದಿಂದ ವಿಷಯಕ್ಕೆ ಹಾರುತ್ತಾನೆ. ಬಾಲ್ಯದಲ್ಲಿ ಆಟದ ಚಿಂತೆ, ಯೌವನದಲ್ಲಿ ಯುವತಿಯ ಚಿಂತೆ, ವೃದ್ಧಾಪ್ಯದಲ್ಲಿ ಎಲ್ಲದರ ಚಿಂತೆ. ಬ್ರಹ್ಮವಸ್ತುಚಿಂತೆ ಯಾರಿಗೂ ಬೇಡದ್ದು ಎಂದಿದ್ದಾರೆ ಶಂಕರಾಚಾರ್ಯರು.[೯] ಸೂತ್ರರೂಪದ ಈ ಅಭಿಪ್ರಾಯವನ್ನೇ, ಶರೀಫರು ಜೀವವನ್ನು 'ಬೆಳವಾ' ಹಕ್ಕಿಯೆಂದು ಪರಿಭಾವಿಸಿ ಬದುಕಿನ ಯಾತ್ರೆಯನ್ನು ನೇರವಾಗಿ ತಿಳಿಸಿದ ಬಗೆ ಹೀಗೆ.

*ಕುಕುಕು ಎನುತದ ಬೆಳವಾ ಬಂದು*
*ಹೊಕ್ಕಿತು ಭವವೆಂಬ ದು:ಖದ ಹಳವಾ ।*

*ಸೊಕ್ಕು ಎಂಬುವ ಗಾಳಿಮಳೆಗೆ*
*ಸಿಕ್ಕು ಬಹು ಪರಿ ತೊಳಲಿ ಬಳಲಿ*
*ಅಕ್ಕರೆಂಬುವ ಬಿಸಲಿನಲಿ*
*ಲೆಕ್ಕವಿಲ್ಲದೆ ತಾಪಗೊಂಡು ।*

*ಮೋಹವೆಂಬುವ ಬಲೆಗೆ ಸಿಲುಕಿ ಕೆಟ್ಟ*
*ಸ್ನೇಹವೆಂಬುವ ಕಂಟಕತಾಕಿ*
*ದಾಹ ಎಂಬುವ ವಿಷಯದಿಂದ*
*ತಾ ಹಗಲು ರಾತ್ರಿಯು ತಿರುಗಿ*
*ದೇಹ ಕಳವಳಗೊಂಡು ಸತಿಸುತ*
*ರಾಹುವಿನ ಬಾಯೊಳಗೆ ಬಿದ್ದು ॥*

*ಆಶೆಯೆಂಬುವ ಬೇಡನಿಂದ ಬಹು*
*ದೇಶ ದೇಶಗಳನು ತಿರುಗಿದರಿಂದ*
*ಕ್ಲೇಶ ಸಾಗರದಲ್ಲಿ ಮುಳುಗಿ*
*ಈಶ ಶಿಶುನಾಳೇಶನ ಚರಣವ*
*ವಿಸು ಜನ್ಮದಿ ಕಾಣದಾಗಿ*
*ತಾಸು ತಾಸಿಗೆ ಕೊರಗಿ ಸೊರಗಿ ॥ (೨೬೦)*

ಭವ = ದು:ಖ, ಸೊಕ್ಕು = ಗಾಳಿಮಳೆ, ಅಕ್ಕರೆ=ಬಿಸಿಲು, ಮೋಹ = ಬಲೆ, ಸ್ನೇಹ= ಕಂಟಕ, ದಾಹ=ವಿಷಯ, ಸತಿಸುತ= ರಾಹು/ಸರ್ಪ, ಆನೆ=ಬೇಡ, ಕ್ಲೇಶ=ಸಾಗರ ಎಂಬ ಸಾರ್ಥಕ

ರೂಪಕಗಳನ್ನು ಬಳಸುವ ಮೂಲಕ ಸುಖ , ದು:ಖ ಎರಡೂ ಬಂಧಕಾರಕ. ಜೀವನ ದೇವಭಾವ ಪ್ರಾಪ್ತಿಗೆ ಅಡ್ಡಿಯೆಂದು ಶರೀಫರು ನಿರೂಪಿಸಿದ್ದಾರೆ. ಬದುಕಿನ ಚಕ್ರಭ್ರಮಣಕ್ಕೆ ಸಿಕ್ಕಿ ಪಾರುಗಾಣದೆ ಬಿಡುಗಡೆಗೆ ಹಂಬಲಿಸುವ ಜೀವದ ಹೃದ್ಯಚಿತ್ರಣ ಈ ಪದದಲ್ಲಡಗಿದೆ. ನೆಲೆಗಾಣದ ಜೀವಕ್ಕೆ ಆಧಾರ ಬೇಕು. ಪಾರುಗೊಳಿಸುವ ಸಹಾಯಕ, ದೇವನೆಂಬ ಉದ್ಧಾರಕ ಬೇಕು. ಅಲ್ಪ ಶಕ್ತಿಯ, ಅಲ್ಪ ಜ್ಞಾನದ, ಅಲ್ಪಾಯುಸ್ಸಿನ ತನ್ನನ್ನು ದಡಮುಟ್ಟಿಸುವ ಪರಮಶಕ್ತಿಯೊಂದಿದೆ. ಅದು ಸರ್ವಜ್ಞ, ಅದು ನಿತ್ಯ ನಿರಂತರ ಎಂಬ ನಂಬಿಕೆ ಜೀವನದು. ಹಾಗಾಗಿ ಆರ್ತನಾಗಿ, ಜಿಜ್ಞಾಸುವಾಗಿ ಸಾಧಕನು ಭಕ್ತಿಯ ಉನ್ಮೇಷದಿಂದ ಮೊರೆ ಇಡುತ್ತಾನೆ.

****

***ಟಿಪ್ಪಣಿ:***

*೧) ವೇದಾಂತಸಾರ*

*೨) ಭಜಗೋವಿಂದಂ- ಮೋಹಮುದ್ಗರಸ್ತೋತ್ರ - ಶ್ರೀ ಶಂಕರಾಚಾರ್ಯ*

*೩) ಶಿವಾಪರಾಧಕ್ಷಮಾಪಣ ಸ್ತೋತ್ರ*

*೪) ಪಾತಂಜಲಯೋಗಸೂತ್ರ - ಸಾಧನಪಾದ ಸೂತ್ರ - ೨೪*

*೫) ಚಂಚಲಂ ಹಿ ಮನ: ಕೃಷ್ಣ ವಾಯೋರಿವ ಸುದುಷ್ಕರಂ ॥ ಭಗವದ್ಗೀತೆ*

*೬) ಸಂಸ್ಕೃತ ಸುಭಾಷಿತ: ಆಶಾ ಯೇಷಾಂ ದಾಸೀ ತೇಷಾಂ ದಾಸಾಯತೇ ಲೋಕ: ।*

*೭) ಡಾ। ಎನ್. ಎಸ್. ಲಕ್ಷ್ಮೀನಾರಾಯಣಭಟ್ ಶಿಶುನಾಳಶರೀಫ ಸಾಹೇಬರ ಗೀತೆಗಳು ಮುನ್ನುಡಿ ಪು -೨೩*

*೮) ವೇದಾಂತಸಾರ*

*೯) ಬಾಲಸ್ತಾವತ್ ಕ್ರೀಡಾಸಕ್ತಃ ತರುಣಸ್ತಾವತ್ ತರುಣೀಸಕ್ತ: ।*
*ವೃದ್ಧಸ್ತಾವತ್ ಚಿಂತಾಸಕ್ತ: ಪರಮೇಬ್ರಹ್ಮಣಿ ಕೋಪಿ ನ ಸಕ್ತ: ॥*

# ಅಧ್ಯಾಯ - ೪

೪.೧. ಅಧ್ಯಾತ್ಮಸಾಧನವಾಗಿ ಭಕ್ತಿ.

೪.೨. ಶರೀಫರ ಪದಗಳಲ್ಲಿ ಭಕ್ತಿತತ್ತ್ವದ ಹಿನ್ನೆಲೆ.

೪.೩. ಭಕ್ತಿತತ್ತ್ವಪದಗಳ ವೈವಿಧ್ಯ.
೧. ದೇವತಾಭಕ್ತಿ.
೨. ಗುರುಭಕ್ತಿ.

# ಅಧ್ಯಾಯ – ೪

## ೪.೦ ಆಧ್ಯಾತ್ಮ ಸಾಧನವಾಗಿ ಭಕ್ತಿ.

ಜಗದ ಜನರನ್ನು ಕಾಯಲು ದೇವ ಸಾಕ್ಷಾತ್ತಾಗಿ ದಂಡ ಹಿಡಿದು ಗೋಪಾಲಕನಂತೆ ಬರುವುದಿಲ್ಲ. ಯಾರನ್ನು ಕಾಪಾಡಬೇಕು, ಉದ್ಧರಿಸಬೇಕು ಎಂದು ಬಯಸುತ್ತಾನೋ ಅವನಿಗೆ ಸದ್ಬುದ್ಧಿಯನ್ನು ದಯಪಾಲಿಸುತ್ತಾನೆ. ಆದರಿಂದಾಗಿ ಅನುಸರಿಸಬೇಕಾದ ಹಾದಿ ಭಕ್ತನಿಗೆ ತಾನಾಗಿ ತಿಳಿಯುತ್ತದೆ. ಏಳಿಗೆಯನ್ನು ಹೊಂದುತ್ತಲೇ ಕೃತಜ್ಞನಾಗಿ ದೈವಸ್ಮರಣೆ ಮಾಡುತ್ತಾನೆ. ದೇವನು ಸ್ವ–ಸ್ವರೂಪದಲ್ಲಿ ಪ್ರತ್ಯಕ್ಷನಾಗದಿದ್ದರೂ ಪರೋಕ್ಷವಾಗಿ ಮಾನವ ಜೀವದ ಉನ್ನತಿಯನ್ನು ಸಾಧಿಸುತ್ತಾನೆ. ಈ ಪರಾಶಕ್ತಿಯನ್ನು ಗೌರವಿಸುವುದು, ಸ್ತುತಿ–ಭಜನೆ ಮಾಡುವುದು, ತನ್ನದೆಲ್ಲವನ್ನು ಅರ್ಪಿಸುವುದು ಇವೆಲ್ಲ ಸಾಧನೆಯ ಸೋಪಾನಗಳು. ಆರೋಗ್ಯವಂತ ಹಾಗೂ ಆಯುಷ್ಮಂತ ಶರೀರವನ್ನು, ಚುರುಕಾದ ಇಂದ್ರಿಯಗಳನ್ನು, ತಿಳಿಯಬಲ್ಲ ಬುದ್ಧಿಶಕ್ತಿಯನ್ನು ನೀಡಿದ ದೇವನನ್ನು ನೆನೆಯುವುದು ಭಕ್ತನ ಕರ್ತವ್ಯ. ಪ್ರಾಚೀನಕಾಲದಿಂದಲೇ ಭಾರತದಲ್ಲಿ ಮೋಕ್ಷಕಾಂಕ್ಷಿಗಳಿಗೆ ಮೂರು ಮಾರ್ಗ–ಜ್ಞಾನ, ಕರ್ಮ ಮತ್ತು ಭಕ್ತಿ. **'ಜ್ಞಾನಾದೇವ ಹಿ ಕೈವಲ್ಯಂ'** ಎಂಬುದು ಉಪನಿಷನ್ಮಾರ್ಗ. ಶಂಕರಭಗವತ್ಪಾದರು ಅದನ್ನು ದೃಢೀಕರಿಸಿದರು. ದರ್ಶನಶಾಸ್ತ್ರಗಳೂ ಅರಿವಿನ ದಾರಿ ಹಿಡಿದವು. ವೇದೋಕ್ತವಾದ ಕರ್ಮ, ಗೀತೆಯಲ್ಲಿ ಪ್ರತಿಪಾದಿಸಿದ ಕರ್ಮ, ಕಾಯಕವೇ ಕೈಲಾಸ ಹೀಗೆ ಕರ್ಮದ ಸರಣಿ. ಭಕ್ತಿಯು ವಿಶಿಷ್ಟವಾದ ರೂಪ. ನಾರದಭಕ್ತಿಸೂತ್ರ, ಶಾಂಡಿಲ್ಯಭಕ್ತಿಸೂತ್ರಗಳಲ್ಲಿ, ಭಗವಂತನಲ್ಲಿ ಹೊಂದಿರುವ ಆತ್ಯಂತಿಕವಾದ ಪ್ರೇಮ, ಅನುರಕ್ತಿ ಎಂಬುದೇ ಭಕ್ತಿ ಎಂದು ವಿವರಿಸಲಾಗಿದೆ. ವೇದದಲ್ಲಿ, ಪುರಾಣಗಳಲ್ಲಿ ಋಷಿಗಳು ಆರಂಭಿಸಿದ ಭಕ್ತಿಯ ದೈವೋಪಾಸನೆ ವಿಸ್ತಾರವಾಗಿ ಬೆಳೆದಿದೆ. ಪ್ರತಿಯೊಬ್ಬ ಭಕ್ತ ಅಚ್ಚರಿಯಿಂದ ಭಯದಿಂದ, ಕುತೂಹಲದಿಂದ, ನಂಬಿಕೆಯಿಂದ, ನೋವು ಸಂಕಟಗಳಿಂದ, ಹೆಮ್ಮೆಯಿಂದ, ಪ್ರಯೋಜನಗಳ ಅಪೇಕ್ಷೆಯಿಂದ ದೈವಿಕ ಶಕ್ತಿಯನ್ನು ಭಜಿಸಿದ್ದಾನೆ, ಪೂಜಿಸಿದ್ದಾನೆ.

ಜ್ಞಾನಮಾರ್ಗಿಗೆ ಶಾಸ್ತ್ರದಲ್ಲಿ–ಗುರುವಿನಲ್ಲಿ ಅಚಲ ಶ್ರದ್ಧೆ ಇರುತ್ತದೆ. ಕರ್ಮಮಾರ್ಗಿಗೆ ಶ್ರದ್ಧೆಯಿಲ್ಲವಾದರೆ ಕರ್ಮ ಸಾಂಗವಾಗಿ, ಸಂಪೂರ್ಣವಾಗಿ, ಸಫಲವಾಗಿ ನಡೆಯಲಾರದು. ಆದೇ ಭಕ್ತಿ ಮಾರ್ಗಿಯ ಶ್ರದ್ಧೆ ಇರುವುದು ದೈವದಲ್ಲಿ, ದೈವದ ಕೃಪೆಯಲ್ಲಿ. ಭಕ್ತರು ಆಧ್ಯಾತ್ಮಿಕವಾಗಿ ಮುನ್ನಡೆಯುತ್ತಿರುವಂತೆ ಹೆಜ್ಜೆಹೆಜ್ಜೆಗೂ ದೇವನ ಸಹಾಯವನ್ನು ಅನುಭವಿಸುತ್ತಾರೆ. ಎದುರು ಬರುವ ಕ್ಲೇಶಪರಂಪರೆಯನ್ನು ದೈವಪರೀಕ್ಷೆ ಎಂದು ಬಗೆಯುತ್ತಾರೆ. ನೇರವಾಗಿ ದೇವನಲ್ಲಿ, ಅವನ ವಿಭೂತಿ ರೂಪಗಳಲ್ಲಿ, ಭಗವದನುಭವ ಪಡೆದ ಸಂತರಲ್ಲಿ, ಸ್ವಯಂಪ್ರೇರಿತನಾಗಿ ನಿರಂತರವಾಗಿ ತೋರುವ

ಭಕ್ತಿಯನ್ನು ಪರಮ ಪ್ರೇಮ, ಪರಾನುರಕ್ತಿ ಎಂದು ಕರೆಯಲಾಗಿದೆ. ಕಬ್ಬಿಣವು ಅಯಸ್ಕಾಂತದೆಡೆಗೆ, ನದಿಯು ಸಾಗರದೆಡೆಗೆ ಏಕಮುಖವಾಗಿ ತಾನಾಗಿ ಚಲಿಸುವಂತೆ ಭಕ್ತನು ದೇವಾಭಿಮುಖನಾಗಿರುತ್ತಾನೆ. ಈ ಪ್ರೇಮಭಾವ ಪರಿಶುದ್ಧ, ನಿಷ್ಕಲ್ಮಷ ಇದರಲ್ಲಿ ಮೋಹವಿಲ್ಲ, ರಾಗ–ದ್ವೇಷಗಳಿಲ್ಲ, ಸ್ವಾರ್ಥ ದೃಷ್ಟಿಯಿಲ್ಲ, ನಿಸ್ವಾರ್ಥ ಹಾಗೂ ಸರ್ವಾರ್ಪಣ ಭಾವವೇ ಇದರ ಲಕ್ಷಣ. ಜಗತ್ತೆಲ್ಲ ದೇವನ ಕೃಪೆಯಿಂದ ಜನಿಸಿದೆ, ಉಳಿದಿದೆ. ತನ್ನನ್ನು ದ್ವೇಷಿಸುವವರನ್ನು ಕೂಡ ದೈಹಿಕವಾಗಿ ಶಿಕ್ಷಿಸಿ, ಅವರ ಪಾಪವನ್ನು ತೊಳೆದು, ಅಪಾರಕೃಪೆಯಿಂದ ದೇವ ಉದ್ಧರಿಸುತ್ತಾನೆ. ಹಾಗಿರುವಾಗ ಭಕ್ತರನ್ನು ಪೊರೆಯದೆ ಇರುತ್ತಾನೆಯೇ?

ಪರಮಾತ್ಮನ ಸ್ವಭಾವ–ಸ್ವರೂಪಲಕ್ಷಣಗಳನ್ನು, ಜೀವಾತ್ಮನಿಗೆ ಅವನೊಡನೆ ಇರುವ ನಿಜವಾದ ಸಂಬಂಧವನ್ನು ಚೆನ್ನಾಗಿ ಅರ್ಥೈಸಿಕೊಳ್ಳುವ ಪ್ರಯತ್ನವೇ ಭಕ್ತಿ. ತಾನು, ತನ್ನದು ಎಂಬ ಎಲ್ಲವನ್ನು ಅವನಿಗರ್ಪಿಸಿ, ಜೀವನದ ಕರ್ತವ್ಯಗಳನ್ನು ಕೂಡ ದೇವನ ಸೇವೆ ಎಂದು ಭಾವಿಸಿ ಭಕ್ತ ನಿರ್ವಹಿಸುತ್ತಾನೆ. ನಿಷ್ಕಾಮತೆಯಿಂದ, ಅಭ್ಯಾಸಯೋಗದಿಂದ ಹಾಗೂ ಯಥಾರ್ಥಜ್ಞಾನಗಳಿಂದ ಬೆಳೆದ ಭಕ್ತಿ ಗಾಢತಮವಾದಾಗ ದೈವದ ಅನುಗ್ರಹ –ಸಾಕ್ಷಾತ್ಕಾರಗಳು ಲಭಿಸುತ್ತವೆ.[೬] ಜ್ಞಾನ– ಭಕ್ತಿ ಎಂಬ ದ್ವೈಧೀಭಾವ ನಾಶವಾಗುತ್ತದೆ. ಜೀವನು ದೇವನಲ್ಲಿ ಒಂದಾಗುತ್ತಾನೆ.

### ೪.೨ ಶರೀಫರ ಪದಗಳಲ್ಲಿ ಭಕ್ತಿ ತತ್ತ್ವದ ನಿರೂಪಣೆಯ ಹಿನ್ನೆಲೆ:

ಶರೀಫರ ಪದಗಳಲ್ಲಿ ಭಕ್ತಿಯು ಮೂಲಭೂತವಾದ ಅಂಶವಾಗಿದೆ. ಅವರ ಸ್ವಭಾವ ಪರೀಕ್ಷೆ ನಡೆಸಿದರೂ ಭಕ್ತಿಯೇ ಪ್ರಧಾನವಾಗಿ ತೋರುತ್ತದೆ. ಅವರ ಜನ್ಮವಾದುದು ಇಸ್ಲಾಂ ಧರ್ಮದಲ್ಲಿ. 'ಇಸ್ಲಾಂ' ಪದದ ಮೂಲ ಅರ್ಥ–ದೈವಿಕ ಶಕ್ತಿಯಲ್ಲಿ ಶರಣಾಗತಿ ಹೊಂದುವುದು. ಶರಣಾಗತಿಯ ಸ್ವರೂಪವನ್ನು ಧರ್ಮನಿಯಮಗಳೆಂದು 'ಶರಿಯತ್' ನಿರ್ಣಯಿಸಿದೆ. ಇನ್ನು ಸೂಫಿಗಳು ಭಕ್ತಿ–ದೈವಪ್ರೇಮಗಳ ಪರಾಕಾಷ್ಠೆಯನ್ನು ಪ್ರದರ್ಶಿಸಿದವರು. ಶರೀಫರು ಭಕ್ತಿಯ ಫಲವಾಗಿ ಜನಿಸಿದವರು. ಹುಲಗೂರಿನ ಸಂತ ಖಾದರಷಾವಲಿಯ ಸಮಾಧಿಯಲ್ಲಿ ಭಕ್ತಿಯಿಂದ ಸೇವೆ ಮಾಡಿದ ಮಾತಾಪಿತೃಗಳಿಗೆ ಅನುಗ್ರಹ ರೂಪವಾಗಿ ದೊರೆತ ಶಿಶು ಶರೀಫ. ಬಾಲ್ಯದಲ್ಲಿ ಸುತ್ತಮುತ್ತಲೂ ಇದ್ದ ಶಿವ ಶರಣರ ಒಡನಾಟ ಮಾಡಿದವರು. ಪ್ರಭುಲಿಂಗಲೀಲೆಯನ್ನು ಪುಟ ಪುಟ ಬಿಡದಂತೆ ಓದಿದವರು. ಪುರಾಣಗಳ–ರಾಮಾಯಣ–ಮಹಾಭಾರತಗಳ ಶ್ರವಣ, ನಾನಾ ಪುಣ್ಯಕ್ಷೇತ್ರಗಳ, ದೇವತೆಗಳ ದರ್ಶನ, ಸಾಧುಸಂತರ, ಮಹಿಮಾವಂತರ ಪ್ರತ್ಯಕ್ಷ ಭೇಟಿ ಪಡೆದವರು. ಇವೆಲ್ಲ ಭಕ್ತಿಭಾವದ ಪೋಷಕಗಳು. ಎಲ್ಲೆಲ್ಲಿ ಈಶ್ವರತ್ವ ಇದೆಯೋ, ಸಂಪತ್ತುಗಳಿವೆಯೋ, ಪ್ರಭಾವ ಬಲಾದಿಗುಣಗಳಿವೆಯೋ ಅವೆಲ್ಲ ದೇವಸನ್ನಿಧಿಯ ಸೂಚಕಗಳು. ಹಾಗಾಗಿ ಶರೀಫರು ತಮ್ಮ ಅನುಭವಕ್ಕೆ ಬಂದ ಪ್ರತಿಯೊಂದು

ಮಹಿಮಾತಿಶಯ ಸ್ಥಾನವನ್ನು ಭಕ್ತಿಯಿಂದ, ವಿನಯದಿಂದ ಸ್ತುತಿಸಿದ್ದಾರೆ. ತಾತ್ತ್ವಿಕವಾದ ಏಕೀಭಾವದಿಂದ ಮತೀಯಪರಿಮಿತಿಗಳನ್ನು ಶಕ್ತವಾಗಿ ದಾಟಿದ್ದಾರೆ. ದೇವಭಾವವು ಸಂಕುಚಿತಮನೋವೃತ್ತಿಯ ಮನುಷ್ಯರಿಂದ ನಿರ್ಮಿತವಾದ ಕೃತಕ ಭೇದ ಭಾವಗಳನ್ನು ಮೀರಿದುದೆಂದು ತೋರಿಸಿಕೊಡುತ್ತಾರೆ. ಇಸ್ಲಾಂಧರ್ಮದ ಆಚರಣೆಗಳನ್ನು ಸಂತರನ್ನು, ಹಿಂದೂದೇವ, ದೇವಿಯರನ್ನು, ಜನಸಾಮಾನ್ಯರು ನಂಬುಗೆಯಿಂದ ನಡಕೊಳ್ಳುವ ಪೂಜ್ಯ ಸ್ಥಾನಗಳನ್ನು ಭೇದವೆಣಿಸದೆ, ಸಮಾನವಾಗಿ ಹಾಡಿ ಹೊಗಳಿದ್ದಾರೆ.

### ೪.೩.೧ ಭಕ್ತಿತತ್ತ್ವಪದಗಳ ವೈವಿಧ್ಯ : ದೇವತಾ ಭಕ್ತಿ

ಶರೀಫರ ಪದಗಳಲ್ಲಿ ಬಹುವಾಗಿ ಕಾಣಿಸುವ ಅಂಕಿತ 'ಶಿಶುನಾಳಧೀಶ'. ಶಿಶುನಾಳ ಗ್ರಾಮದಲ್ಲಿ ಬಯಲ ಗುಡಿಯಲ್ಲಿ ಸ್ತಂಭ ಮೂರ್ತಿಯಾಗಿ ನೆಲೆನಿಂತ ಬಸವಣ್ಣನೇ ಶರೀಫರ ಆರಾಧ್ಯ ದೇವತೆ. ಉದ್ಧರಿಸುವವನು ಅವನೇ ಎಂದು ಅತ್ಯಂತವಾಗಿ ಭಕ್ತಿಯನ್ನು ತಮ್ಮ ಪದಗಳಲ್ಲಿ ಪ್ರಕಟಿಸಿದ್ದಾರೆ. ಶಿವ–ಮೈಲಾರ ಲಿಂಗ, ನೀಲಕಂಠ, ರಾಮಲಿಂಗ (ಶಿಗ್ಗಲಿ) ಕೃಷ್ಣ, ಬಸವ, ಅತ್ತಿಗೇರಿಯ ಹನುಮ ದುರ್ಗೆ, ಶಾಕಂಭರೀ, ಏಳು ಕೊಳ್ಳದ ಎಲ್ಲಮ್ಮ, ವೀರಭದ್ರ, ಮಹಮ್ಮದ್, ಖಾದರ್ ಲಿಂಗ ಮುಂತಾದವರ ಸ್ತುತಿಪದ್ಯಗಳನ್ನು ಹಾಡಿದ್ದಾರೆ. ಮಂಗಳಾರತಿ ಕಾಲದಲ್ಲಿ ಹಾಡುವ ಪದಗಳನ್ನು ರಚಿಸಿದ್ದಾರೆ. ಹುಟ್ಟಾ ಮುಸ್ಲಿಮರಾದ ಶರೀಫರು ಇಷ್ಟೊಂದು ದೇವತೆಗಳ ಬಗ್ಗೆ ಹಾಡಿದ್ದು ಈಗ ವರ್ತಮಾನದ ಸನ್ನಿವೇಶದಲ್ಲಿ ಅಚ್ಚರಿ ಎನಿಸಿದರೂ, ಆಗಿನ ಸಾಮಾಜಿಕ ಸನ್ನಿವೇಶದಲ್ಲಿ ಸಾಮಾನ್ಯವಿಚಾರ. ಭಕ್ತನಿಗೆ ದೇವರ ಮಹಿಮೆಯೇ ಭಕ್ತಿಗೆ ಕಾರಣ ಹೊರತು, ನಾಮ ರೂಪಗಳಲ್ಲ. ನಾಮ–ರೂಪಗಳು ವ್ಯವಹಾರದ ಸೌಕರ್ಯಕ್ಕೆ ಇರುವುದೆಂದು ಅರಿತವನು ಭೇದವೆಣಿಸುವುದಿಲ್ಲ. ಅವರವರ ಭಾವಕ್ಕೆ ಅವರವರ ಭಕುತಿಗೆ ಅನುಗತವಾದ ದೇವತಾ ಸ್ವರೂಪವನ್ನು ಧ್ಯಾನಿಸಿ ಭಜಿಸಬಹುದಾದರೂ, ದೇವಾನುಭವ ಪಡೆದ ಭಕ್ತನಿಗೆ ಶಿವನೋ ಕೇಶವನೋ, ದೇವನೊಬ್ಬನೇ ಎಂಬುದು ನಿಶ್ಚಿತವಿರುತ್ತದೆ. ಋಗ್ವೇದದ ಮಂತ್ರ **'ಏಕಂ ಸತ್ ವಿಪ್ರಾ ಬಹುಧಾ ವದಂತಿ'** ಎಂಬ ಋಷಿವಚನದ ಯಥಾರ್ಥತೆ ಮನಗಾಣುತ್ತದೆ.

ಪಾಲಿಸಯ್ಯ ಪಾರ್ವತೀಪತಿ, ದಶಾವತಾರಕಾ ಕೃಷ್ಣ, ಮೈಲಾರಮಹದೇವ ಕೈಲಾಸ ಪತಿಯೆ, ಭಲಿರೇ ಬಾಲದಂಡ ಶಿಲೆಯೊಳಗೆ ಮೂಡಿ (ಹನುಮ), ನೀಲಕಂಠನ ದಿವ್ಯ ಆಲಯದೊಳು ಬಂದು, ಪಾಹಿಮಾಂದಯಾಳು ಕೃಪಾಕರ ರಾಮಲಿಂಗ ಮೂರ್ತಿಸದ್ಗುರು, ನಂಬಿದೆ ನಾನಿನ್ನ ಶಂಭೋ, ಜಗನ್ಮಾತೆ ಜಯತು ಜಗದಂಬಾ, ನಾ ಕಂಡೆನೀಗ ಶಾಕಂಬರಿಯಾ, ಎಲ್ಲಮ್ಮನಂಥಾಕೀ ಎಲ್ಲಿ ಕಾಣೇ ಮುಂತಾದ ವಿವಿಧದೇವತಾಕೀರ್ತನೆಗಳು ಕೇವಲ ಸ್ತುತಿಪರವಾದವು. ಆಶುಕವಿಯಾದ ಶರೀಫರು,

ಸ್ವಪ್ರೇರಣೆಯಿಂದ ಅಥವಾ ಪರರ ಮಾತಿನಂತೆ ಆಯಾ ದೇವರ ವರ್ಣನಾತ್ಮಕಕೃತಿಯನ್ನು ರಚಿಸಿರಬೇಕು.

ದೇವನ ಸರ್ವವ್ಯಾಪಕತೆಯನ್ನು ಹಾಗೂ ಪ್ರೇಮದ ಘನೀಭೂತ ಅವಸ್ಥೆಯೆ ಭಕ್ತಿ ಎಂಬುದನ್ನು ಈ ಪದದಲ್ಲಿ ಕಾಣಬಹುದು.

*ನಂಬಿದೆ ನಾ ನಿನ್ನ ಶಂಭೋ*
*ರಕ್ಷಿಸು ಎನ್ನ* ।
*ಕುಂಭಿನಿಯೊಳು ಬಿಡದೆ*
*ತುಂಬಿ ತುಳುಕುತಲಿರುವೆ* ॥

*ಹರನಾಮದಲಿ ಪ್ರೇಮದಲಿ*
*ಕರೆಗೊಂಡು ಮನಸಿನಲಿ*
*ವರವ್ಯಸನವನು ಕಳೆದು*
*ನಿರುತ ಪಾಲಿಸು ದೇವಾ* ॥ (೧೫)

'ನಡಿಯೋ ದೇವರ ಚಾಕರಿಗೆ, ಮುಕ್ತಿಗೊಡೆಯ ಖಾದರಲಿಂಗ ನೆಲಸಿರ್ಪ ಗಿರಿಗೆ' ಎಂಬ ಪದ ಹುಲಸೂರಿನ ಸೂಫಿಸಂತ ಖಾದರ ಷಾವಲಿಯ ಕುರಿತಾದುದು. ತನ್ನ ಜನ್ಮಕ್ಕೆ ಕಾರಣ ಸಮಾಧಿಸ್ಥನಾದ ಸಂತನ ಅನುಗ್ರಹ ಎಂಬುದಾಗಿ ತಿಳಿದ ಶರೀಫರು ಬಹಳವಾಗಿ ಅವರಲ್ಲಿ ಭಕ್ತಿ ಹೊಂದಿದ್ದರು. ಅದೊಂದೇ ಕಾರಣವಲ್ಲ. ತನ್ನ ನಾಮದಿಂದ ರೂಪದಿಂದ, ಕ್ರಿಯೆಗಳಿಂದ, ಸುತ್ತಮುತ್ತ ಜನಪದ ಸೀಮೆಗಳನ್ನು ಗೆದ್ದವರು ಖಾದರಲಿಂಗ. ತನ್ನ ಮಹಿಮೆಯಿಂದ ಜನರನ್ನು ತನ್ನ ಭಕ್ತರನ್ನಾಗಿ ಮಾಡಿಕೊಂಡವರು. ಅಂತಹ ಅವರನ್ನು, ಕಾಮ ಕ್ರೋಧಗಳನ್ನು ಕಾಲಲ್ಲೊದೆದು ನಿಯಮಬದ್ಧ ನಡತೆಯಿಂದ, ತನ್ನಲ್ಲೇ ಭಜಿಸಬೇಕು.

*ಬಯಲಿನೊಳು ಬಯಲು ಪುಟ್ಟಿಸಿದಾ ನಿರ್*
*ಬಯಲಿನೊಳಗೆ ತನ್ನಾಲಯವ ಕಟ್ಟಿಸಿದಾ*
*ಭವನಿವಾರಣ ಭಕ್ತ ವತ್ಸಲ*
*ಅಹುದೆನಿಸಿ ನಿಶ್ಚಯಿಸಿ ಮನದೊಳು* – (೬)

ಖಾದರಲಿಂಗನ ವಿಶೇಷವನ್ನು ಹೀಗೆ ಬಣ್ಣಿಸಿದ್ದಾರೆ. ಅವನಲ್ಲಿ ಬೇಡಬೇಕಾದ್ದೇನು?

*ಜೀವಪರಮರೊಂದುಗೂಡಿ, ಅನು–*
*ಭಾವದಿ ಸಾಯುಜ್ಯ ಪದವಿಯ ಬೇಡಿ,*

ದೇವರ ಚಾಕರಿಗೆ ನಡೆಯಬೇಕು. '*ಖಾದರಿ ಸದಾವರಿ*' ಎಂಬ ಕೃತಿಯಲ್ಲಿ ನಿತ್ಯನಿರಂಜನ, ಮೌನಿ, ಪ್ರಪಂಚದೂರ, ಪದವಿದೂರ, ಹಮ್ಮನಳಿದವ ಮುಂತಾಗಿ ಅವರ ವೈರಾಗ್ಯಸ್ಥಿತಿಯ ಪ್ರಶಂಸೆ ಮಾಡಲಾಗಿದೆ. ಇವರ ಇತಿಹಾಸ ಹೀಗಿದೆ. ಹಜರೇಶಾ ಖಾದರಿ ಸವಣೂರಿನಿಂದ ಹುಲಗೂರಿಗೆ

ಬಂದು ನೆಲೆಯಾದವರು. ಹಿಂದೂಇಸ್ಲಾಂಧರ್ಮಗಳ ಸಂಗಮದ ಕನಸು ಕಂಡವ. ಬಯಸಿ ಬಂದವರಿಗೆ ಲಿಂಗದೀಕ್ಷೆಯ ಕೊಟ್ಟು ಖಾದರಲಿಂಗ ಎಂದು ಪ್ರಸಿದ್ಧನಾದ[9]. ಈತನ ಗೋರಿಗೆ ಕಾಯಿಸಕ್ಕರೆ ಒಪ್ಪಿಸಿ, ಹರಕೆ ಸಲ್ಲಿಸಿ, ಆಮೇಲೆ ಹುಟ್ಟಿದ ಶರೀಫನಲ್ಲೂ ಅದೇ ಗುಣ ಅಚ್ಚೊತ್ತಿದ್ದಂತೆ ಕಾಣಿಸುತ್ತದೆ.

*ದೇವಿ ನಿನ್ನ ಸೇವಕನೆಂದು ಸೇವೆ ಮಾಡುವೆನೆಂದು*
*ಇಂದು ನಿನ್ನ ಚರಣಗಳನ್ನು ಹೊಂದುವೆ ಬಂದು*
*ಮಂದಮತಿ ನಿನ್ನ ಕಂದನಿಗೆ ಚಂದದಿ ಆನಂದದಿ ನಿನ್ನ*
*ಕಂದನೆಂದು ಸಲಹು ಇಂದು ॥ (24)*
ಎಂಬ ಪದದಲ್ಲಿ ಮಗುವಾಗಿ, ದಾಸನಾಗಿ ದೇವಿಯನ್ನು ಬೇಡುತ್ತಾರೆ.

*ಎಷ್ಟು ತಾಳಲಿ ದುಷ್ಟ ಮನುಜರ*
*ದೃಷ್ಟಿ ತೆರೆದು ನೋಡಲು ಇಂದು,* ಎನ್ನುತ್ತಾ **ಆರ್ತ ಭಕ್ತಿ**ಯ ಮೊರೆ ಇಡುತ್ತಾರೆ.

ಗುಡಗೇರಿದ್ಯಾಮವ್ವನ ಕುರಿತಾದ ಕೃತಿಯಲ್ಲಿ ಸರ್ವಸಮರ್ಪಣದ ಭಾವ ತೋರುತ್ತದೆ. ನಾರದ ಭಕ್ತಿಸೂತ್ರದಲ್ಲಿ ವಿವರಿಸಿದ **'ಆತ್ಮನಿವೇದನ'** ಎಂಬ ಭಕ್ತಿಪ್ರಕಾರಕ್ಕೆ ದೃಷ್ಟಾಂತ ಈ ಕೆಳಗಿನ ಪದ. ಅರ್ಥವು ಸುಸ್ಪಷ್ಟವಾಗಿದೆ.

*ಮಾನಾಪಮಾನ ನಿನ್ನವಮ್ಮಾ ಎನಗೇನು*
*ಶ್ವಾನನಂತೆ ಬೊಗಳುತಿಹರು ಹೀನ ಜನರೆಲ್ಲರಿವರು ।*

*ಸದಾ ನಿನ್ನ ಧ್ಯಾನದೊಳಿರಲು*
*ಮದಾ ಬಂದಿತೆಂಬುವರಿವರು*
*ಕದನವ ಮಾಡುವರಿವರು*
*ನಿಧಾನವ ತಿಳಿಯದೆಯವರು*
*ಇದು ನಿನ್ನ ಮನಸ್ಸಿಗೆ*
*ಮೃದುವಾದರೊಳಿತಮ್ಮಾ ॥*

*ನಿನ್ನ ಚಿಂತೆಯೊಳಿರಲು*
*ಬನ್ನ ಬಡಿವರೆನ್ನ ಖಳರು*
*ಸಣ್ಣ ಮಾತನಾಡುವವರು*
*ಸೊನ್ನಿ ಸೂಕ್ಷ್ಮವರಿಯದವರು*
*ಎನಗೇನು ಕುಂದುವದು*
*ನಿನಗದು ಹೊಂದುವದು ॥*

*ನಿಜಾನಂದ ಬೋಧ ಎನಗೆ*
*ಕುಜನರ ನಿಂದೆ ನಿನಗೆ*

*ಸುಜನರ ರಕ್ಷೆಯೊಳಗೆ*
*ಗಜಬಿಜ ಬರುವದು ನಿನಗೆ*
*ಭಜಿಸುವೆ ಗುಡಿ ಪುರೇಶನ*
*ನಿಜ ವಿಷಯ ನಾಯಕಿ ॥ (೨೭)*

ಭಗವದ್ಗೀತೆಯ ಭಕ್ತಿಯೋಗದಲ್ಲಿ ತಿಳಿಸುವ ಭಕ್ತನ ಲಕ್ಷಣಗಳನ್ನು ಈ ಪದ ಒಳಗೊಂಡಿದೆ. ಮಾನಾಪಮಾನಗಳಲ್ಲಿ, ಹರ್ಷ-ಅಸಹನೆ-ಭಯಗಳಲ್ಲಿ ಏಕರೂಪನಾಗಿ ಇರುವುದು, ಲೋಕದ ಜನರಿಂದ ಉದ್ವಿಗ್ನತೆ ಹೊಂದದಿರುವುದು, ನಿಂದಾಸ್ತುತಿಗಳನ್ನು ಸಮವಾಗಿ ಕಾಣುವುದು, ಮೌನ-ಸಂತೋಷಗಳಿಂದ ಇರುವುದು, ತನ್ನ ಮನವನ್ನು ಬುದ್ಧಿಯನ್ನು ದೇವನಿಗೆ ಅರ್ಪಿಸುವುದು[೩]

*ಹೌದೆ ನಮ್ಮವ್ವಾ ನೀನು ಹೌದೆ*
*ಹೌದೆ ಭವದಗೊನಿ ಕೊಯ್ದೆ*
*ಮುಕ್ತಿಯ ಮನಿಗ್ಹೋದೆ ನಮ್ಮವ್ವ ನೀನು ಹೌದೆ ।*
*ಹಿಡಿದೆ ಧರ್ಮದ ಮಾರ್ಗ*
*ಕಡಿದು ಕರ್ಮದ ಬೇರು*
*ಕಡಿದೆ ನಮ್ಮವ್ವಾ ನೀನು ಹೌದೆ ॥ (೨೩)*

ಸಂಕ್ಷಿಪ್ತವಾದ, ಗಾಥಾರ್ಥಸೂಚಕವಾದ ಪದವಿದು. ಸಂಸಾರಕ್ಕೆ ಇಳಿದು ಅನುಭವಿಸಬೇಕಾದ ಫಲಗಳನ್ನು ನಾಶ ಮಾಡಿ, ಮುಕ್ತಿಯ ಕೊಡುವ, ಧರ್ಮದ ಮಾರ್ಗ ಹಿಡಿಸಿ, ಕರ್ಮದ ಬೇರನು ಕಡಿದು ಮಹದುಪಕಾರ ಮಾಡುವ ದೇವಿ ತಾಯಿಯೇ ಹೌದು. ಮಾರ್ಕಂಡೇಯಪುರಾಣದ ದೇವೀಮಹಾತ್ಮೆಯಲ್ಲಿ–**'ಸರ್ವೋಪಕಾರಕರಣಾಯ ಸದಾರ್ದ್ರಚಿತ್ತಾ'** ಎಲ್ಲರ ಉಪಕಾರಕ್ಕಾಗಿ ಯಾವಾಗಲೂ ದಯಾರ್ದ್ರವಾದ ಮನಸ್ಸುಳ್ಳವಳು ಎಂದು ಸ್ತುತಿಸಿದೆ. ಈ ಸ್ವರೂಪದ ಭಕ್ತಿಯನ್ನು **'ಗುಣಮಾಹಾತ್ಮ್ಯಾಸಕ್ತಿ'** ಎಂದಿದ್ದಾರೆ ಭಕ್ತಿಸೂತ್ರಕಾರರು.

ಹೌದೆ ನಮ್ಮವ್ವ, ನಾ ಕಂಡೆನೀಗ ಶಾಕಂಭರಿಯಾ, ದೇವಿದಂಡಕ, ಅಂಬಾಗಾರುತಿಯನ್ನು ರಂಭೆಯರು ಬೆಳಗಿರೆ ಇವೆಲ್ಲ ಶಾಕ್ತಸಂಪ್ರದಾಯದ ಪ್ರಭಾವದ ಕುರುಹಾಗಿ ಕಾಣಿಸುತ್ತವೆ.

ಸಾಧನೆಯ ಪಥ ಸವೆಸುವ ಭಕ್ತ ಹಂತಹಂತಗಳನ್ನು ದಾಟುತ್ತಿದ್ದಂತೆ ದೊರೆಯುವ ಅನುಭವವಿಶೇಷಗಳನ್ನು ನಿರೂಪಿಸುತ್ತ, ಅಂತಿಮಗುರಿಯನ್ನು ಸಾಕಾರಗೊಳಿಸುವಂತೆ ಬೇಡುವ ಪದವಿದು. ಬೆಡಗಿನ ವಚನಗಳಂತೆ ತೋರುತ್ತವೆ ಈ ಸಾಲುಗಳು–

*ನೀನೆ ಅನಾದಿ ನಾನೇನು ಬೇಡಲಿ ಶಂಭೋ ಲಿಂಗಾ।*
*ಮಾನವ ಜನ್ಮಕೆ ಬಂದು ಏನೇನು ತಿಳಿಯಲಿಲ್ಲೋ ಶಂಭೋ ಲಿಂಗಾ॥*

*ಹಾವು ಹರದಾಡಿತು, ಚೇಳು ಕುಣಿದಾಡಿತು, ಶಂಭೋ ಲಿಂಗಾ।*
*ಹಾವು ಚೇಳನ ನುಂಗಿ ಕೋಳಿಕೂಗುವದು ಶಂಭೋ ಲಿಂಗಾ॥*

*ಪಕ್ಕವಿಲ್ಲದ ಪಕ್ಷಿ ಗಗನದೊಳಾಡಿತು ಶಂಭೋ ಲಿಂಗಾ।*
*ಅಕ್ಕರದು ಶಿವಾ ನೋಡಿ ತಾ ನಗುತಿಹನು ಶಂಭೋ ಲಿಂಗಾ॥*

*ಮಾಯವೆಂಬುದು ಮನಿಮಾಡಿತು ದೇಹದೊಳು ಶಂಭೋ ಲಿಂಗಾ।*
*ಆವಕಾಲಕೆ ಇದು ಪರಿಹರವಾಗುವದು ಶಂಭೋ ಲಿಂಗಾ॥*

*ಹರಸಿದೇವತೆಗಳಿಗೆ ಬ್ರಹ್ಮನ ಕಾವಲ ಶಂಭೋ ಲಿಂಗಾ।*
*ಗುರುಮಂತ್ರ ಬಲದಿಂದ ಈ ಭಾವ ನೀಗುವದು ಶಂಭೋ ಲಿಂಗಾ ॥*

*ಕಲ್ಲುದೇವರು ಕಣ್ಣುಮುಚ್ಚಿ ಕಾಪಾಡಿದವು ಶಂಭೋ ಲಿಂಗಾ।*
*ಬಲಿದ ಶಿಶುನಾಳ ಧೀಶನ ದಯದಿಂದ ಶಂಭೋ ಲಿಂಗಾ॥*

ದೈವಾನುಗ್ರಹಕ್ಕೆ ಹೇತುವಾದ ಈ ಮೂರು ಅಂಶಗಳು[*] ಮನುಷ್ಯತ್ವ, ಮುಮುಕ್ಷುತ್ವ ಹಾಗೂ ಮಹಾಪುರುಷಸಂಶ್ರಯ ಇವು ಬಹುದುರ್ಲಭವಾದುವು. ಮೊದಲನೆಯದಾಗಿ ಮನುಷ್ಯನಾಗಿ ಹುಟ್ಟಬೇಕು. ಆದರೊಡನೆ ಸಹಜವಾಗಿ ಜ್ಞಾನವೈರಾಗ್ಯಗಳು, ಮುಕ್ತಿ ಪಡೆವ ಬಯಕೆ ಬೆಳೆದು ಬರಬೇಕು. ಮಾರ್ಗದರ್ಶನ ನೀಡಿ, ತಪ್ಪಿದಲ್ಲಿ ಸರಿಪಡಿಸಿ, ಗುರಿಮುಟ್ಟಿಸುವ ಕರುಣಾಶಾಲಿಯಾದ ಮಹಾತ್ಮನಾದ ಗುರುಬೇಕು. ಹಾಗಿದ್ದರೆ ಮಾತ್ರ ದೇವ ಅನುಗ್ರಹಿಸಿಯಾನು. ಲಕ್ಷಾಂತರ ಜೀವ ರಾಶಿಗಳಲ್ಲಿ ಸಶಕ್ತ, ಸಮರ್ಥ ಮನೋಬುದ್ಧಿಇಂದ್ರಿಯಗಳಿರುವ ನರಶರೀರ ದೊರೆಯುವುದು ಜೀವನಿಗೆ ಮೊದಲವರ. ಪುಣ್ಯವೆಂಬ ಬಹುಮೌಲ್ಯವನ್ನು ಕೊಟ್ಟರೆ ಮಾತ್ರ ಈ ದೇಹ ದೊರೆವುದಂತೆ. ಅದನ್ನು ವ್ಯರ್ಥ ಮಾಡಕೂಡದು. ಮುಕ್ತಿಗಾಗಿ ಬಯಸಬೇಕು, ಪಡೆವ ಸಂಕಲ್ಪ ಮಾಡಬೇಕು. ಅವಶ್ಯಕಸಾಧನೆಗಳನ್ನು ಪೂರೈಸಬೇಕು. ಅಷ್ಟೆಲ್ಲ ಇದ್ದರೂ "ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ". ಸುಯೋಗ್ಯನಾದ ಗುರುವನ್ನು ಅನ್ವೇಷಿಸಿ ಶರಣು ಹೋಗಬೇಕು. ಅವನ ನುಡಿಗಳೇ ಆಪ್ತವಾಕ್ಯ. ಅವನ್ನು ಪಾಲಿಸಿ ತನ್ನನ್ನು ತಾನೇ ಉದ್ಧರಿಸಿ ಕೊಳ್ಳಬೇಕು. ಸಮ್ಯಗ್ದರ್ಶನಕ್ಕಾಗಿ ಶ್ರದ್ಧಾಸಹಿತನಾಗಿ ಯತಶೀಲನಾಗಿ ಯೋಗಾರೂಢನಾಗಿರಬೇಕು.

ಜ್ಞಾನಕ್ಕೆ ಅಧಿಕಾರಿ ಈಶ್ವರ. ಆದಿಗುರುವಾದ ಶಿವನಲ್ಲಿ ಶರೀಫರು ದೈನ್ಯದಿಂದ ನಿವೇದಿಸಿ ಕೊಳ್ಳುತ್ತಾರೆ. ಮಾನವಜನ್ಮ ಪಡೆದು ಯಾವ ಸಾಧನೆಯನ್ನು ಮಾಡಲಿಲ್ಲ. ಯಾವ ಅರಿವನ್ನೂ ಗಳಿಸಲಿಲ್ಲ. ದೇಹದಲ್ಲಿ ಮಾಯವು ಅಂದರೆ ಅಜ್ಞಾನ ನೆಲೆ ನಿಂತಿದೆ. ಈ ಅಜ್ಞಾನ, ಈ ಮೋಹ, ಈ ಅನಾತ್ಮನಿಷ್ಠೆ ಪರಿಹಾರವಾಗುವ ಕಾಲ ಎಂದು ಬರುವುದು? ಅದಕ್ಕಾಗಿ ವಿಚಾರಕ್ಕೆ ತೊಡಗಬೇಕು. ಅಜ್ಞಾನವೆಂಬ ಅಂಧಕಾರ ನೀಗಿಸುವ ಗುರುವನ್ನು ಸೇರಬೇಕು. ಅವನ ಮಂತ್ರ ಬಲದಿಂದ ವಿವೇಕ, ವಿರಕ್ತಿ, ಶಮ, ದಮಗಳನ್ನು ಬೆಳೆಸಿಕೊಳ್ಳಬೇಕು. (ಮನನದಿಂದ ಯಾವುದು ರಕ್ಷಿಸುತ್ತದೆಯೋ ಅದೇ

ಮಂತ್ರ). ಯೋಗಸಾಧನೆಯ ಮೆಟ್ಟಲುಗಳನ್ನು ಏರುತ್ತಿದ್ದಂತೆ ಹಾವು ಹರಿದಾಡಿತು. ಕುಂಡಲಿನೀ ಶಕ್ತಿ ಜಾಗೃತವಾಯ್ತು. ಚೇಳು ಕುಣಿದಾಡಿತು, ಸುಪ್ತಶಕ್ತಿ ಎಚ್ಚರವಾದಾಗ ವಿದ್ಯುತ್‌ಚಲನೆಯಂತೆ ಭಾಸವಾಯಿತು. ಅಭ್ಯಾಸವು ನಿರಂತರ ನಡೆದಾಗ, ಕುಂಡಲಿನೀಶಕ್ತಿಯ ಆರಂಭಿಕಅನುಭವಗಳನ್ನು ದಾಟಿ, ಊರ್ಧ್ವಮುಖೀಸಂಚಾರಕ್ಕೆ ತೊಡಗಿದಾಗ ಕೋಳಿ ಕೂಗುವದು ಅಂದರೆ ಜ್ಞಾನದ ಮುಂಬೆಳಕು ಮೂಡುವುದು. ದೇಹ ಕಂಪನ, ಸ್ವೇದನ, ಅಂತರ್ನಾದ ಶ್ರವಣ ಇವೆಲ್ಲ ಯೋಗದ ಅಭ್ಯಾಸದ ಪರಿಣಾಮಗಳು. ದೇಹದ ಮಿತಿಯನ್ನು ಮೀರಿ, ಜಾಗ್ರತ-ಸ್ವಪ್ನ-ಸುಷುಪ್ತಿ ಅವಸ್ಥೆಗಳನ್ನು ದಾಟಿ ಜೀವನು, ಹೇಗೆ ಹಕ್ಕಿಯು ಬಹಿರಾಕಾಶದಲ್ಲಿ ಸ್ವೇಚ್ಛೆಯಾಗಿ ಆನಂದದಿಂದ ವಿಹರಿಸುತ್ತದೋ ಹಾಗೆ ಹೃದಯವೆಂಬ ಚಿದಾಕಾಶದಲ್ಲಿ ವಿಹರಿಸುತ್ತಾನೆ. ನಿಷ್ಕಾರಣವಾದ, ಬಹಿರುಪಾಧಿಗಳನ್ನು ಅವಲಂಬಿಸದ ಪರಮಾನಂದವನ್ನು ಸವಿಯುತ್ತಾನೆ.

*ಪಕ್ಕವಿಲ್ಲದ ಪಕ್ಷಿ ಗಗನದೊಳಾಡಿತು*
*ಅಕ್ಕರದಲಿ ನೋಡಿ ಶಿವಾ ತಾ ನಗುತಿಹನು ।*

ಒಂದು ಸ್ವಾರಸ್ಯಪೂರ್ಣ ಗೀತೆಯಿದೆ. ನಿಂದಾಸ್ತುತಿಯ ರೂಪದಲ್ಲಿರುವ ಈ ಪದ ಗೆಳೆಯನನ್ನು ಹಾಸ್ಯಕ್ಕಾಗಿ ಆಡಿಕೊಳ್ಳುವಂತೆ ಇದೆ. **ಸಖ್ಯ ಭಾವದ ಭಕ್ತಿ** ಸ್ವರೂಪಕ್ಕೆ ಉದಾಹರಣೆಯಂತಿದೆ.

*ಪಾಪರಹಿತ ಪರಮಾತ್ಮ ಸರ್ವೋತ್ತಮ*
*ತಾಪಸಂಹಾರ ಪರಾತ್ಪರ ॥*

*ನೋಡಿ ಏನು ಭಜಿಸಲಿ ನಾನು*
*ಕಾಡಿದರೆ ಸಿಗುವುದು ಏನು*
*ರೂಢಿಗೈವನೇ ಕಾಲ ಕೂಟವಿಷ*
*ಕೇಡಿಗ ಶೇಷಾಭರಣ*

*ಧನಿಕನೆಂದು ನಾನನ್ನುವೆನೆ?*
*ಮನಕೆ ಸಂಶಯವು ಬರುತಲಿದೆ*
*ತಿರಿದುಣ್ಣುತ ನೀ ತಿರುಗುತಿಹೆ*

*ಪುಂಡನೆಂಬೆನೆ, ಬಂಡುಮಾಡಿದಾಮಧ್ಯ*
*ಪಾಂಡವ ಮಲ್ಲಯುದ್ಧದಿ*
*ಕಂಡು ಕಂಡು ನಾನೆಂತು ಭಜಿಸಲಿ*

*ಕಂತು ಹರನೆ ಗೌರೀಕಾಂತನೆ*
*ಶಾಂತಮೂರ್ತಿ ನೀ ಎಂಬೆನೆ ನಾನು*
*ಭ್ರಾಂತಿಯಿಂದ ತ್ರಿಶೂಲವಪಿಡಿದೆ*
*ಉರಿಗಣ್ಣು ಉರಿಹಸ್ತ ಹಿರಿಯ ದೇವರೊಳು*

*ನಿರುತ ಬೇಡಿ ಕಾಡುತಿಹುದು ಖೋಡಿಮನ ॥*

*ವಾಹನ ಬೇಡಲು ಮತ್ತೇನು ?*
*ಆದಿ ಅನಾದಿ ಮುದಿಎತ್ತು ತಾನು*
*ಆವ ಆಶೆಯಿರುವುದು ಇನ್ನು (೩)*

ಓ ಶಿವನೇ, ನಿನ್ನನ್ನು ಭಕ್ತಿಯಿಂದ ನೋಡಲು, ಭಕ್ತಿಯಿಂದ ಬೇಡಲು ಯಾವ ವಿಶೇಷವಿದೆ ನಿನ್ನಲ್ಲಿ? ಕಾಡಿಬೇಡಿ ಕೇಳಿದರೆ ಕೊಡಲು ಯೋಗ್ಯವಾದುದು ಏನಿದೆ? ವಿಷ ಸರ್ಪವನ್ನು ಬಿಟ್ಟರೆ! ಧನಿಕನೆಂದು ಭಾವಿಸಿ ಸಂಪತ್ತು ಕೇಳೋಣವೇ? ಆಗದು. ಕಪಾಲ ಹಿಡಿದು ಭಿಕ್ಷೆಗೆ ಹೊರಟವ. ವೀರ ಪರಾಕ್ರಮಿ ಎನ್ನೋಣವೇ? ಯುದ್ಧದಲ್ಲಿ ಅರ್ಜುನನಿಗೆ ಸೋತವ. ಶಾಂತಮೂರ್ತಿ ಎನ್ನಲೇ? ಕೈಗಳಲ್ಲಿ ತ್ರಿಶೂಲ, ಬೆಂಕಿ. ಹಣೆಯಲ್ಲಿ ಉರಿಕಾರುವ ಕಣ್ಣು. ವಾಹನ ಕೇಳಲು ಆಗದು. ಏಕೆಂದರೆ ಅವನ ವಾಹನವೇ ಬಡ, ಮುದಿಎತ್ತು. ಯಾವ ವಿಧದ ಸಂಪತ್ತನ್ನು ಕೇಳಿದರೂ ಶಿವನಲ್ಲಿ ಅದು ಇಲ್ಲ. ಇನ್ನೊಂದು ಮತ್ತೊಂದು ಎಂಬ ಆಶೆ ಪಡುವುದೇ ವ್ಯರ್ಥ. ಪರ್ಯಾಯವಾಗಿ ಶಿವನಲ್ಲಿ, ಶಿವನ ಸ್ವರೂಪದಲ್ಲಿ ಐಹಿಕಐಶ್ವರ್ಯದ ನಿರಾಕರಣವೇ ಸೂಚಿತವಾಗಿದೆ. ಹಾಗಿದ್ದರೆ ಶಿವಭಕ್ತಿ ನಿರರ್ಥಕವೇ ?

*ದೇವ ಭವದ ಪಾಶಹರಿ ನೀನು*
*ಕಾವಕರುಣಿ ಶಿಶುನಾಳಧೀಶ*
*ಮುಕ್ತಿಯೊಂದು ಕೊಡು ಪರಮೇಶ.*

ಅವನಲ್ಲಿ ಬಯಸಬೇಕಾದ್ದು ಮುಕ್ತಿಯೊಂದನ್ನೇ. ಭವಪಾಶವ ನೀಗಿಸಿ, ಕರುಣೆಯಿಂದ ಕಾಯುತ್ತ ಮೋಕ್ಷವನ್ನು ನೀಡಬಲ್ಲವ ಪರಮಶಿವ. ಬಾಹ್ಯರೂಪದಲ್ಲಿ ಅಕಿಂಚನನಾದ ಶಿವನಲ್ಲಿ ಸರ್ವೇಶ್ವರತ್ವ ಅಡಗಿದೆ.

ಯಾವುದೇ ಜ್ಞಾನಿಯ ಅಥವಾ ಸಂತ ಸತ್ಪುರುಷನ, ಯೋಗಿಯ ಜೀವನದ ಚರಿತ್ರೆಯನ್ನು ಅವಲೋಕಿಸಿದರೆ ಒಂದು ಅಂಶ ಎಲ್ಲರಿಗೂ ಸಾಮಾನ್ಯವಾದುದು. ಮನೆಯಲ್ಲಿ ಕುಳಿತು, ನೆಮ್ಮದಿಯಿಂದ ಇದ್ದುಕೊಂಡು, ಸಾಧನೆ–ತಪಸ್ಸುಗಳನ್ನು ಮಾಡಿ ಫಲ ಪಡೆದುದು ಕಾಣಿಸುವುದಿಲ್ಲ. **"ಯದಹರೇವ ವಿರಜೇತ್, ತದಹರೇವ ಪ್ರವ್ರಜೇತ್'** –ಎಂದು ವೈರಾಗ್ಯ ಮೂಡುವುದೋ ಅಂದೇ ಮನೆಬಿಟ್ಟು ಹೊರಗೆ ನಡೆ ಎಂದು ಉಪನಿಷತ್ತು ಆದೇಶಿಸಿದೆ. "ಜಗವೆಲ್ಲ ಮಲಗಿರಲು ಇವನೊಬ್ಬನೆದ್ದ– ಅವನೇ ಆದ ಬುದ್ಧ." **"ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ"** –ಎಲ್ಲ ಜೀವಿಗಳಿಗೆ ಸೋತು ವಿಶ್ರಾಂತಿ ಪಡೆಯಲು, ಚಟುವಟಿಕೆಗಳಿಂದ ವಿರಾಮ ಹೊಂದಲು ಇರುವ ರಾತ್ರಿಯಲ್ಲಿ, ಸಂಯಮ ಸಾಧಿಸಿದ ವ್ಯಕ್ತಿ ಎಲ್ಲರಂತೆ ನಿದ್ದೆ ಹೋಗದೆ

ಎಚ್ಚರವಾಗಿರುತ್ತಾನೆ ಎಂದಿದೆ ವೇದ. ಶಂಕರಾಚಾರ್ಯರು ಎಂಟರ ಪ್ರಾಯದಲ್ಲೇ ಸಂಸಾರವನ್ನು ಮೊಸಳೆ ಎಂದು ಪರಿಗಣಿಸಿ ಸಂನ್ಯಾಸಿಯಾದರು. ಮಹಾತ್ಮರೆಲ್ಲ ಮನೆ ಬಿಟ್ಟು, ಊರು–ಕಾಡನ್ನೆದೆ, ಗುಡ್ಡ–ಬೆಟ್ಟಗಳೆನ್ನದೆ, ಮಳೆ–ಚಳಿಗೆ ಹೆದರದೆ, ಬಿಸಿಲಿಗೆ ಬಾಡದೆ, ಹಸಿವು–ಬಾಯಾರಿಕೆಗೆ ಸೋಲದೆ, ನಿದ್ದೆ– ವಿಶ್ರಾಂತಿಗಳನ್ನು ಬಯಸದೆ, ಸ್ಥಾನ–ಮಾನಗಳಿಗೆ ಹಂಬಲಿಸದೆ, ದೇವರಿಗಾಗಿ–ಗುರುವಿಗಾಗಿ–ಅರಿವಿಗಾಗಿ ಹುಡುಕಾಡಿದವರು. ಅಕ್ಕಮಹಾದೇವಿ ಚೆನ್ನಮಲ್ಲಿಕಾರ್ಜುನನ ಕುರಿತಾಗಿ, ಕಂಡಿರಾ? ನೀವು ಕಂಡಿರಾ? ಎಂದು ಕೇಳಿದಂತೆ ಭಕ್ತರು ಭಗವಂತನಿಗೋಸ್ಕರ ಹಂಬಲಿಸಿದವರು. ಗಿರಿ–ನದಿ–ವನ–ತೀರ್ಥ–ಗುರು–ಏಕಾಂತ ಹೀಗೆ ಹತ್ತು ಹಲವು ಸ್ಥಾನಗಳಲ್ಲಿ ಭಕ್ತಿಯ ಆವೇಶದಿಂದ ಬಳಲಿ ತೊಳಲಿ ಪರದಾಡಿದವರು. ಜೀವ –ದೇವರ ವಿರಹ ತಾಳಲಾರದೆ ಸಂತಾಪ ಪಟ್ಟವರು. ಅಂತಹ **ವಿರಹ ಭಕ್ತಿಯ** ಸುಂದರ ಚಿತ್ರಣ ಈ ಪದದಲ್ಲಿದೆ.

*ಹುಡುಕುತ ನಾ ಎಲ್ಲಿಗ್ಹೋಗಲಿ?*
*ಹುಡುಕಿ ಹುಡುಕಿ ನಾ ಬ್ಯಾಸತ್ತೆ ।*

*ಏಳು ಸಮುದ್ರಗಳು ಏಳು ದಿವಸಗಳು*
*ಹಾಳು ಬಿದ್ದವು ಕೇಳಿ ಕೇಳಿ ಬ್ಯಾಸತ್ತೆ ।*

*ನದಿಗಳನೆಲ್ಲಾ ಹುಡುಕಿ ಬ್ಯಾಸತ್ತೆ*
*ಉದಕ ತುಂಬಿದ ಬಾವಿ ನದರಿಟ್ಟು ನೋಡಿದೆ ।*

*ಧರೆಯಲಿ ತಿರುಗಿದೆ, ಗಿರಿಯೆಲ್ಲ ಚರಿಸಿದೆ*
*ಸರಸಿಜ ಮುಖಿಯೇ । ಪರಮಾತ್ಮ ಸಿಗಲಿಲ್ಲ ॥*

*ಕಡಿಯಭಾಗದಿ ನಾನು ಸುಡುಗಾಡ ಹುಡುಕಿದೆ*
*ನಡುಊರೊಳು ಬಂದು ಮಿಡಿಕ್ಯಾಡಿ ನೋಡಿದೆ ॥ (೧೪೬)*

ಬಾಹ್ಯ ಲೋಕದಲ್ಲಿ ಪರಮಾತ್ಮ ಸಿಗಲಾರ. ಅಂತರ್ಯದಲ್ಲೇ ಅನ್ವೇಷಣೆ ನಡೆಸು ಎಂಬ ಸೂಚನೆ ಇದ್ದಂತೆ ತೋರುತ್ತದೆ.

ದೇವ ಒಲಿಯುವುದು ಭಕ್ತಿಗೆ. ಆ ನಂಬಿಕೆ ಅನೇಕರಿಗೆ ಯಥಾರ್ಥವಾಗಿ ಪರಿಣಮಿಸಿದೆ. ಪುರಾಣದ ಪ್ರಹ್ಲಾದನಿಂದ ತೊಡಗಿ ಅಸಂಖ್ಯಾತ ಭಕ್ತರು ವೈವಿಧ್ಯಮಯವಾದ ವಿಚಿತ್ರವೆನಿಸುವ ಸನ್ನಿವೇಶಗಳಲ್ಲಿ ಪರಮಾತ್ಮನನ್ನು ಸಾಕ್ಷಾತ್ಕರಿಸಿಕೊಂಡಿದ್ದಾರೆ. ಶರೀಫರ ಜೀವನದಲ್ಲಿಯೂ ದೇವ ಕಾರುಣ್ಯದ ಘಟನೆ ಸಂಭವಿಸಿವೆ. ಅದು ಕೇವಲ ವೈಯಕ್ತಿಕವಲ್ಲ. ಜನತೆಗೆ ಪ್ರದರ್ಶಿತವಾದ ದೃಷ್ಟಾಂತ.

ಹಮ್ ತೋ ದೇಖಾ ಮಹಮ್ಮದ್ ನೂರ್ ಎ ಗಂವರ್–ಎಂಬ ಹಾಡು ಲಕ್ಷ್ಮೇಶ್ವರದಲ್ಲಿ ರಚಿತವಾದುದು. ಹಿಂದುಗಳ– ಕಾಫರರ ಆಚಾರ–ವಿಚಾರ–ದೇವಭಕ್ತಿಗಳನ್ನು ಅನುಸರಿಸುವ ಶರೀಫರನ್ನು ಸಹಿಸದ ಕಡು ಮುಸ್ಲಿಮರು, ಅವರನ್ನು ಕಾಫಿರ ಎಂದು ಹೀಯಾಳಿಸುತ್ತಾರೆ. ಆಸಾರ್ ಮಹಲ್‌ನಲ್ಲಿ ಜರಗುವ ಈದ್‌ಆಚರಣಗೆ ಪ್ರವೇಶವನ್ನು ನಿರಾಕರಿಸುತ್ತಾರೆ.. ಹೊರಗೇ ನಿಂತಿದ್ದ ಶರೀಫರಿಗೆ ರತ್ನಪ್ರಭೆಯ ಕಾಂತಿಯಲ್ಲಿ ಮಹಮ್ಮದ್ ಪೈಗಂಬರರು ಕಂಡರಂತೆ ಆಗಲೇ ಹಾಡಿದರು ಹಮ್ ತೋ ದೇಖಾ.. . . .

ಅತ್ತಿಗೇರಿಯಲ್ಲಿ ಹನುಮಂತದೇವರ ದರ್ಶನಕ್ಕಾಗಿ ಶರೀಫರು ತೆರಳುತ್ತಾರೆ. ಮುಸಲ್ಮಾನ ಜಾತಿಗೆ ಸೇರಿದವನು ಎಂಬ ಕಾರಣದಿಂದ ಹಿಂದುಗಳು ಅವರನ್ನು ತಡೆಯುತ್ತಾರೆ. ಹೊರಗಿನಿಂದಲೇ ಕೈ ಜೋಡಿಸಿ ದಂಡಕಸ್ತುತಿಯನ್ನು ರಚಿಸಿ ಹಾಡಿದರು. ರಾಮ ಸೇವಕನಾಗಿ ಮಾಡಿದ ಸೇವಾ ಕಾರ್ಯಗಳನ್ನು ಬಣ್ಣಿಸುತ್ತಾರೆ. ಲಂಕಾಯುದ್ಧ, ಅಹಿರಾವಣ ಸಂಹಾರ, ಲವಕುಶ ಪ್ರಸಂಗ, ಮಹಾಭಾರತ ಯುದ್ಧ ಎಲ್ಲವನ್ನು ಉಲ್ಲೇಖಿಸಿ ಹಾಡುತ್ತಾರೆ.

*. . . . . ಅತಿಗೇರಿ ಸ್ಥಳದಿ ಪ್ರ–*
*ಚಂಡವೀರ ಹನುಮಂತ ಪ್ರಭೋ*
*ಉದ್ದಂಡ ಗುರುಗೋವಿಂದನ ಕರುಣದಿ*
*ಕಂಡುಸುರುವೆ ನಿನ್ನ ಪಾದಕಮಲ ಕರ*
*ದಂಡ ಎತ್ತಿ ನಮೋ ಎಂಬೆನ್ನೈ । (೨೬೯)*

ಸಂತುಷ್ಟನಾದ ಮಾರುತಿ ಹೂಗಳನ್ನು ಪ್ರಸಾದವಾಗಿ ನೀಡುತ್ತಾನೆ.

ಭಗವದ್ಗೀತೆಯಲ್ಲಿ ಕೃಷ್ಣ ಚತುರ್ವಿಧಭಕ್ತರನ್ನು ಹೇಳಿದ್ದಾನೆ, ಆರ್ತ, ಜಿಜ್ಞಾಸು, ಅರ್ಥಾರ್ಥೀ ಮತ್ತು ಜ್ಞಾನಿ. ಶರೀಫರು ಆರ್ತರಲ್ಲ. ವೈಯಕ್ತಿಕ ಸಂಕಟ ಪರಿಹಾರಕ್ಕೆ ಬೇಡಿದವರಲ್ಲ. ಪರಮಾತ್ಮವಿಷಯಕಜಿಜ್ಞಾಸೆ ಅವರನ್ನು ಪ್ರೇರಿಸಿದೆ. ಯಾವ ಸಂಪತ್ತಿನ, ಕೀರ್ತಿಯ ಅಪೇಕ್ಷೆ ಇಲ್ಲವಾದ್ದರಿಂದ ಅವರು ಅರ್ಥಾರ್ಥಿಯೂ ಅಲ್ಲ. ದೇವರ ಭಿನ್ನ ಪ್ರಕಾರದ ನಾಮರೂಪಗಳನ್ನು ಗೌರವಿಸಿ, ಒಳಗಿನ ತತ್ತ್ವ ಒಂದೇ ಎಂಬುದನ್ನು ತಿಳಿದು, ಭಜಿಸಬೇಕು ಎಂಬ ಕಾರಣಕ್ಕಾಗಿಯೇ ಭಕ್ತಿ ಮಾಡಿದರು. ಹಾಗಾಗಿ ಅವರನ್ನು **ಜ್ಞಾನೀಭಕ್ತ** ಎಂದು ಗುರುತಿಸಬಹುದು.

**೪.೩.೨. ಶರೀಫರ ಗುರುಭಕ್ತಿ:**

ಶರೀಫರು ದೇವರಲ್ಲಿ ತೋರುವ ಭಕ್ತಿ ಅಪಾರವಾದುದು. ಅದಕ್ಕಿಂತ ಹೆಚ್ಚಿನ ತೂಕದ್ದು ಗುರುಭಕ್ತಿ. ಹರಿಮುನಿದರೆ ಗುರು ಕಾಯುವ. ಗುರುಮುನಿದರೆ ಕಾವನಾರು? ಹಾಗಾಗಿ ಗುರುವಿನಲ್ಲಿ ಭಕ್ತಿ ಅತ್ಯಗತ್ಯ. ಗುರುಭಕ್ತಿಯ ಪರಂಪರೆ ಪ್ರಾಚೀನಕಾಲದಿಂದ ನಡೆದು ಬಂದಿದೆ. ವಿಸ್ತಾರವಾಗಿ

ಹರಡಿದೆ. ಉಪನಿಷತ್ಕಥೆಗಳನ್ನು ಪರಿಶೀಲಿಸುವಾಗ, ಋಷಿಗಳಲ್ಲಿ ಬ್ರಹ್ಮಜ್ಞಾನ ಬಯಸಿ ಬಂದ ಶಿಷ್ಯರ ಗುಣನಡತೆ ಹಾಗೂ ಭಕ್ತಿ-ವಿಧೇಯತೆಗಳು ಮಾದರಿಯಾಗಿರುವುದು ತಿಳಿಯುತ್ತದೆ. ಶ್ವೇತಕೇತು, ಆರುಣಿ, ನಚಿಕೇತ, ಸತ್ಯಕಾಮ ಮುಂತಾದ ಋಷಿಕುಮಾರಕರ ಗುರುನಿಷ್ಠೆ ಲೋಕಪ್ರಸಿದ್ಧವಾದ ವಿಚಾರ. ಗುರುಭಕ್ತಿಯ ಮಾರ್ಗವನ್ನು ಪ್ರದರ್ಶಿಸುವ ಜ್ವಲಿಸುವ ದೀಪಗಳು ಅವರು. ವೇದ-ವೇದಾಂತ-ಯೋಗ-ತಂತ್ರ ಇತ್ಯಾದಿ ಶಾಸ್ತ್ರಸರಣಿಯಲ್ಲಿ ಗುರುವಿನ ಸ್ಥಾನ ಹಿರಿದಾದುದು. ಪ್ರತಿಯೊಬ್ಬ ಸಾಧಕನಿಗೆ ಗುರು ಬೇಕೇ ಬೇಕು. ಗುರುವಿಲ್ಲದೆ ಸಾಧನೆ ಇಲ್ಲ. ಸೂಫಿಗಳು – ಶರಣರು –ದಾಸರು– ಇವೆಲ್ಲ ಭಕ್ತ/ಅನುಭಾವಿ ಪಂಥಗಳಲ್ಲಿ ಗುರುವಿಗೆ ಮಹತ್ತರ ಪೂಜ್ಯತೆ ನೀಡಲಾಗಿದೆ. ಗುರುವು ಪ್ರಾಪ್ತತತ್ತ್ವನಾಗಿರಬೇಕು. ಅರ್ಹತೆ ಗಳಿಸಿರುವ ಶಿಷ್ಯನಿಗೆ ದೀಕ್ಷೆಯನ್ನು ಕೊಟ್ಟು ಮುಂದಿನ ಸಾಧನ ಪಥಕ್ಕೆ ಸಜ್ಜು ಗೊಳಿಸುತ್ತಾನೆ. ವೈದಿಕರಲ್ಲಿ ಉಪನಯನ, ಶರಣರಲ್ಲಿ ಲಿಂಗದೀಕ್ಷೆ, ಸೂಫಿಗಳಲ್ಲಿ ಶಮಲು – ಶಿಲೇಮಣಿ[6]ಗಳನ್ನು ಕೊಡುವುದು ಶಿಷ್ಯಪರಿಗ್ರಹದ ವಿಧಾನ.

ಸರ್ವಜ್ಞ ಹೇಳುವಂತೆ – *ಮೊಸರ ಕಡೆಯಲು ಬೆಣ್ಣೆ*
*ಒಸೆದು ತೋರುವ ತೆರದಿ*
*ಹಸನುಳ್ಳ ಗುರು ವಿನುಪದೇಶದಿಂ ಮುಕ್ತಿ ವಶನಾಗದಿಹನೆ ಸರ್ವಜ್ಞ* ।

ಗುರುವನ್ನು ಬೆಂಬಿಡದೆ, ನೆರಳಿನಂತೆ ಹಿಂಬಾಲಿಸಿ, ವಿದ್ಯೆ ಸಂಪಾದಿಸುವವ ಶಿಷ್ಯ. ಅವನನ್ನು 'ಅಂತೇವಾಸಿ'(ಛಾಯಾಭೂತಃ , ಅಪರಿತ್ಯಾಗೀ) ಎಂದು ಉಪನಿಷತ್ತು ಕರೆದಿದೆ. ಎತ್ತಾಗಿ, ತೊತ್ತಾಗಿ, ಹಿತ್ತಲದ ಗಿಡವಾಗಿ,ಮತ್ತೆ ಪಾದದ ಕೆರವಾಗಿ ಗುರುವಿನ ಹತ್ತಿರಿರು . . . ಸರ್ವಜ್ಞ. ಆದ್ದರಿಂದ ಒಟ್ಟಾರೆ ಗಮನಿಸಿದಾಗ ಗುರುವಿನ ಗುರುತ್ವ ಪರಮ ಎನ್ನಬೇಕು.

ಶರೀಫರಲ್ಲಿ ಅಧ್ಯಾತ್ಮದ ಪಿಪಾಸೆ ಉಂಟಾದ್ದು ರಾಮಾಯಣ ಭಾರತಗಳ ಓದಿನಿಂದ. ಪ್ರಭುಲಿಂಗಲೀಲೆಯ ಪಠನದಿಂದ, ಸರ್ವಜ್ಞ ಮತ್ತು ಸರ್ಪಭೂಷಣ ಶಿವಯೋಗಿಗಳ ವಚನಗಳಿಂದ, ಕಾವ್ಯ-ಪುರಾಣಪ್ರವಚನಗಳಿಂದ. ಸಮಾನಶೀಲರಾದ ಗೆಳೆಯರೊಡನೆ ಚರ್ಚೆಯಿಂದ ಜಿಜ್ಞಾಸೆ ಬಲವಾಯ್ತು. ಆಗಲೇ ಯೋಗಾಯೋಗದಿಂದ ದೊರೆತವರು ಕಳಸದ ಗೋವಿಂದಭಟ್ಟರು. ಸ್ಮಾರ್ತಬ್ರಾಹ್ಮಣ, ಶಾಕ್ತಸಂಪ್ರದಾಯ ಪಾಲಿಸುತ್ತಿದ್ದ ಅದ್ವೈತವೇದಾಂತಿ. ಜ್ಞಾನಿ, ಉದಾರಿ, ಪವಾಡಪುರುಷ. ಪ್ರಾಪಂಚಿಕರಾಗಿದ್ದರೂ ಅವಧೂತಲಕ್ಷಣಗಳನ್ನು ಹೊಂದಿದ್ದರು. ವರ್ಣಾಶ್ರಮಗಳ ಆಚಾರಗಳನ್ನು ಮೀರಿ ನಿಂತವರು. ಅರಿವಿನ ಹಸಿವಿದ್ದ ಶರೀಫರನ್ನು ಮುಸಲ್ಮಾನ ಎಂದು ಭಾವಿಸದೆ, ಯಾವ ಹಿಂಜರಿಕೆಯೂ ಇಲ್ಲದೆ ಶಿಷ್ಯನನ್ನಾಗಿ ಸ್ವೀಕರಿಸುತ್ತಾರೆ. ಆಗ ಶರೀಫರ ಆನಂದಕ್ಕೆ ಪಾರವೇ ಇಲ್ಲ.

*ದೊರಕಿದಾಗುರು, ದೊರಕಿದಾ।*
*ಪರಮಾನಂದ ಬೋಧ ಅರಿವಿನೊಳಗೆ ಬಂದು।*
*ಕರಪಾತ್ರೆ ಹಿಡಿದು ಈ*
*ನರಶರೀರದಿ ತನ್ನ*
*ಅರುವ ತನಗೆ ತೋರಿ*
*ಪರಮ ನಂಬುಗೆಯಲಿ । ದೊರಕಿದಾ . . . ।*

*ಹಿಂದೆ ಜನ್ಮಾಂತರ*
*ಒಂದು ಉಳಿಯದಂತೆ*
*ಒಂದು ವಸ್ತುವಿನೊಳು*
*ಚಂದದಿಂದಲಿ ಬಂದು । ದೊರಕಿದಾ ॥*
*ಶಿಶುನಾಳಧೀಶ ಪ್ರ*
*ಕಾಶ ಗೋವಿಂದನ*
*ಅಸಮ ತೇಜೋರೂಪ*
*ಕಿರಣದಿಂದಲೆ ಬಂದು । ದೊರಕಿದಾ . . . ॥ (೩೨)*

ಎಂದು ಹಾಡಿ ಹಿಗ್ಗುತ್ತಾರೆ. ಬೊಗಸೆ ಹಿಡಿದು ಭಿಕ್ಷೆ ಬೇಡಿದರೂ ಆತ್ಮಜ್ಞಾನವ ಉಂಟು ಮಾಡಿದರು. ಗತಜನ್ಮದ ಕರ್ಮಗಳೆಲ್ಲ ಲೋಪವಾಗಿ, ಆ ಒಂದು ವಸ್ತು (ಮುಕ್ತಿ) ಲಾಭವಾಗುವಂತೆ ಅನುಗ್ರಹಿಸಿದರು. ದೇವರೇ ಅಸಮಾನ ತೇಜಸ್ಸಿನ ಗೋವಿಂದ ಭಟ್ಟರಾಗಿ ಬಂದು ಗುರುವೆನಿಸಿದ್ದನ್ನು ಧನ್ಯತೆಯಿಂದ ಹೇಳಿದ್ದಾರೆ. ಗುರುಸೇವೆ ಅತ್ಯಂತ ಅವಶ್ಯಕವಾದ್ದು. ಭವ ದಾಟಿಸುವ ಗುರುವಿನ ಆಶ್ರಯದಿಂದ ಶ್ರೇಯಸ್ಸು ದೊರೆವಾಗ, ಸಾಮಾನ್ಯನರಸೇವೆ ಯಾತಕ್ಕೆ? ಎಂದು ಪ್ರಶ್ನಿಸಿದ್ದಾರೆ. "ಶ್ರೀಗುರುಮಂತ್ರವ, ರಾಗದಿಸ್ತುತಿಸಲು, ಬೋಧಸಂಪದಸುಖವಾಗುವದೋ" ಎಂದು ವಿವರಿಸಿದ್ದಾರೆ.

*ಗುರುಸೇವೆ ಮಾಡೋ ನೀನು*
*ಪಾಮರ ಮೂಢಾ ।*
*ಗುರುಸೇವೆ ಮಾಡದೆ*
*ನರಸೇವೆ ಮಾಡುವೆ*
*ತಾರಿಸುವವರಕಾಣೆ , ತಾಮಸ ನಿನ್ನೊಳು ।*

*ಬಂದೇನು ಇಲ್ಲೆ ಕಂಡಿ ?*
*ಹಿಂದಿನ ಕರ್ಮಫಲವೆಲ್ಲ ಇಲ್ಲೆ ಉಂಡಿ*
*ಮುಂದಿನ ಮಾರ್ಗತಿಳಕೊಳ್ಳೊ ಹುಚ್ಚಮುಂಡೆ*
*ಎಚ್ಚರಿಕಿಲ್ಲದ ಹುಚ್ಚನತೆರನಂತೆ*
*ಬೆಟ್ಟನ ಮರದಂತೆ ಕೆಟ್ಟನಾಗಲಿ ಬ್ಯಾಡ॥ (೩೪)*

ಶರೀಫರು ಬೈಯುವುದನ್ನು ನೋಡಿದರೆ, ಸಾಮಾನ್ಯರ ಅಜ್ಞಾನದ ಬಗ್ಗೆ ಅವರ ಅಸಹನೆ ತಿಳಿಯುತ್ತದೆ. ಅಂದರೆ ತಿರಸ್ಕಾರವಲ್ಲ. ಗಾಣದೆತ್ತು ತಿರುಗುವಂತೆ ಏನೆಂದು, ಯಾಕೆಂದು ತಿಳಿಯದೆ, ಸುಮ್ಮನೆ ಜೀವನ ಸಾಗಿಸುತ್ತಾರೆ. ಅಂತಹವರಿಗೆ ಹೇಗಾದರೂ ಅರಿವು ಮೂಡಿಸಬೇಕು ಎಂಬ ಅನುಕಂಪ ಅವರಿಂದ ಬೈಗಳ ಹೊರಡಿಸುತ್ತದೆ. ಪಾಮರ, ಮೂಢ, ತಾಮಸ, ಹುಚ್ಚ ಇವೆಲ್ಲ ಚುಚ್ಚಿ

ಎಬ್ಬಿಸಲು ಪ್ರಯೋಗಿಸಿದ ಪದಗಳು. ಶಂಕರಾಚಾರ್ಯರ ಭಜಗೋವಿಂದಂ ಮೂಢ ಮತೇ ಎಂಬುದನ್ನು ನೆನಪಿಗೆ ತರುತ್ತದೆ. ಮಾತ್ರವಲ್ಲ ಅವರ ಉಪದೇಶ ಪಂಚಕದ ಕೆಲ ವಾಕ್ಯಗಳೂ ಅನುವಾದ ಮಾಡಿದಷ್ಟು ನೇರವಾಗಿ ಇಲ್ಲಿ ಕಾಣಿಸುತ್ತವೆ.

*ಹಿಂದಿನ ಕರ್ಮ ಇಲ್ಲೆ ಉಂಡಿ –ಪ್ರಾರಬ್ಧಂ ತು ಇಹಭುಜ್ಯತಾಂ*
*ಪ್ರಾರಬ್ಧವನ್ನು ಅನುಭವಿಸಿ ಮುಗಿಸು*
*ಮುಂದಿನ ಮಾರ್ಗತಿಳಕೊ –ನ ಆಪಿ ಉತ್ತರೈ ಶ್ಲಿಷ್ಯತಾಂ*
*ಹೊಸ ಕರ್ಮಗಳೊಡನೆ ಲಿಪ್ತನಾಗದಿರು.*
*ವಾದವಮಾಡಿ ಕಾದುವದ್ಯಾಕೊ ಖೊಟ್ಟಿ–ಬುಧಜನೈರ್ವಾದಃ ಪರಿತ್ಯಜ್ಯತಾಂ*
*ಪಂಡಿತರಲ್ಲಿ ವಾದ ಬೇಡ*
*ಬೋಧದ ಮಾರ್ಗವ ಸಾಧಿಸಿ ಸದ್ಗುರು*
*ಪಾದಸೇವೆಯೊಳ್ ನಿರತನಾಗಿ ಬೇಗನೆ*

***'ಸಜ್ಜನರ ಸಂಗವದು ಹೆಜ್ಜೇನು ಮೆದ್ದಂತೆ', ಸತ್ಸಂಗತ್ವೇ ನಿಸ್ಸಂಗತ್ವಂ',*** ಈ ವಾಕ್ಯಗಳು, ಆಚಾರ್ಯ ಕೌಟಿಲ್ಯ ವಿಧಿಸುವ **'ವೃದ್ಧಸಂಯೋಗ'**, ಇವು ಸಾಧುಸತ್ಪುರುಷರ, ವಿದ್ಯಾ–ಜ್ಞಾನ–ವಯೋ ವೃದ್ಧರ ಸಹವಾಸ ಅದೆಷ್ಟು ಉಪಕಾರಿ ಎಂದು ತಿಳಿಸುತ್ತದೆ. ಬಿಡಬಾರದ ಸಂಗವದು. ಗೊಡ್ಡು ವಾದದಿಂದ, ವೃಥಾಚರ್ಚೆಯಿಂದ, ತರ್ಕದ ಚಮತ್ಕಾರಗಳಿಂದ ಆಗುವ ಲಾಭವೇನಿಲ್ಲ. ಕಾಲಹರಣವಷ್ಟೇ. ಜ್ಞಾನಿಗಳು ಹೇಳಿದಂತೆ ದುಸ್ತರ್ಕ ಬಿಡು, ಪಂಡಿತರಲ್ಲಿ ವಾದವನ್ನು ತ್ಯಜಿಸು, ಎಂದಿದ್ದಾರೆ ಶರೀಫರು. ತನ್ನ ಅಸ್ತಿತ್ವ – ಸ್ಥಿತಿ– ಗುರಿಗಳನ್ನು ಅರಿತುಕೊಳ್ಳದೆ ಮಂದ ಬುದ್ಧಿಯಂತೆ ಉನ್ಮತ್ತನಂತೆ ವರ್ತಿಸುವ ಬದಲು ಗುರುಸೇವೆ ಮಾಡಿ ಬೋಧ ಮಾರ್ಗ ಸಂಪಾದಿಸಬಾರದೇ ಎಂದು ಕೇಳುತ್ತಾರೆ. ಅದಕ್ಕಾಗಿ,

*ಹೋಗೋಣ ನಡಿಯೊ ಬೇಗನೆ ಎದ್ದು*
*ಸಾಗಿ ಸದ್ಗುರುವಿನ ಯೋಗ್ಯ ಮಂದಿರಕೆದ್ದು.* – ಈ ಗುರುಸೇವೆಯಿಂದ ಫಲವಿದೆ. ಗುರುವು ವರ ನೀಡುತ್ತಾನೆ.

*ಪರಮ ನಿತ್ಯಾನಂದ ಸುಖವು*
*ಅರಿವು ಹಿಡಿದು ನುಡಿಯುತಿರಲು*
*ಸ್ಮರನ ಮತ್ಸರವನು ಗೆದ್ದು*
*ಮರಣ ಬಾಧೆ ಮಾಯಿತುಳಿದು।*
*ಸದ್ಗುರುವಿನ ವರವು ನಮಗೆ ಇರಲಿ*
*ಸರಸಿಜ ಮುಖಿಯೆ । (೩೮)*

ಗುರುಗೋವಿಂದಭಟ್ಟ ಹಾಗೂ ಶರೀಫರ ಅನ್ಯೋನ್ಯಾನುಬಂಧ ಸಾಮಾನ್ಯರಿಗೆ ನಿಲುಕದ, ಅರ್ಥವಾಗದ ಸಂಗತಿ. ಕರ್ಮಠಹಿಂದುಗಳು ಬ್ರಾಹ್ಮಣಗೋವಿಂದಭಟ್ಟರ ಆಚಾರಭ್ರಷ್ಟತೆಯನ್ನು, ಮುಸ್ಲಿಮನ ಸಹವಾಸವನ್ನು ನಿಂದಿಸುತ್ತಾರೆ. ಮುಸ್ಲಿಮರು ಶರೀಫರನ್ನು ಕಾಫಿರ್ ಎಂದು ದೂರುತ್ತಾರೆ. ಆದರೆ ಇಬ್ಬರೂ ಸಂಕುಚಿತಮನದ ಜನರ ಆಕ್ಷೇಪಗಳನ್ನು ಲೆಕ್ಕಿಸುವುದಿಲ್ಲ. ವೈರಾಗ್ಯ ಸಂಪನ್ನರಾಗಿ ನಿರ್ಭಯರಾಗಿದ್ದ ಹಾಗೂ ಯಥಾರ್ಥಜ್ಞಾನಿಗಳಾಗಿ ಧರ್ಮದ ಪ್ರತೀಕಗಳ ಸಂಕೇತಗಳ

ಅರಿವಿದ್ದ ಗೋವಿಂದಭಟ್ಟರು ತಮ್ಮ ಜನಿವಾರವನ್ನು ಶರೀಫರಿಗೆ ತೊಡಿಸುತ್ತಾರೆ. ಶಿಷ್ಯನನ್ನಾಗಿ ಪರಿಗ್ರಹಿಸುತ್ತಾರೆ. ಶರೀಫರಿಗೆ ಉಪನಯನವಾದಂತಾಯಿತು.

ತ್ರಿವರ್ಣಗಳಾದ ಬ್ರಾಹ್ಮಣ–ಕ್ಷತ್ರಿಯ–ವೈಶ್ಯರು ದ್ವಿಜವರ್ಗಕ್ಕೆ ಸೇರಿದವರು. ಉಪವೀತ ಧಾರಣೆಮಾಡಿ, ಗುರುಕುಲ ಸೇರಿ ವೇದ–ಶಾಸ್ತ್ರಗಳನ್ನು ಅಧ್ಯಯನ ಮಾಡುವ ಅಧಿಕಾರ ಪಡೆದವರು. ಆ ಸಂಸ್ಕಾರವನ್ನು 'ಉಪನಯನ' ಎನ್ನುತ್ತಾರೆ. ಉಪ ಎಂದರೆ ಸಮೀಪ. ನಯನ ಎಂದರೆ ಒಯ್ಯುವುದು. ಇಲ್ಲಿ ಗುರುವಿನ ಸಮೀಪ –ವಿದ್ಯಾ ಸಮೀಪ –ಬ್ರಹ್ಮದ ಸಮೀಪ ಒಯ್ಯುವ ದೀರ್ಘ ಪ್ರಕ್ರಿಯೆಯ ಆರಂಭವಾದ್ದರಿಂದ 'ಉಪನಯನ' ಎಂಬ ಹೆಸರು. ಆಚಾರ್ಯನು ಶಿಷ್ಯನಿಗೆ ಉಪವೀತ ತೊಡಿಸಿ ಸೂರ್ಯನ–ಅಗ್ನಿಯ ಉಪಾಸನೆ ಮಾಡಿಸಿ, ಮಂತ್ರೋಪದೇಶವನ್ನು ಕೊಟ್ಟು, ಬ್ರಹ್ಮಚರ್ಯ ವ್ರತವನ್ನು ಪಾಲಿಸುವ ವಿಧಾನವನ್ನುಪದೇಶಿಸಿ, ನಿಧಾನವಾಗಿ ವೇದ –ಶಾಸ್ತ್ರಗಳನ್ನು ಅಧ್ಯಾಪನ ಮಾಡುತ್ತಾರೆ. ಈ ಬಗೆಯಲ್ಲಿ ಶಿಷ್ಯನ ಉದ್ಧಾರಕ್ಕಾಗಿ ಗುರುವು ಮಾಡುವ ಪ್ರಯತ್ನದ ಆರಂಭದ ಸಂಕೇತ ಉಪವೀತ. ಅದನ್ನು ಶರೀಫರಿಗೆ ತೊಡಿಸಿ, ಗೋವಿಂದ ಭಟ್ಟರು ಅವರ ವಿದ್ಯಾಧ್ಯಯನದ, ತಪಸ್ಸಿನ, ಸಾಧನೆಯ, ಮಾರ್ಗದರ್ಶನಗಳ ಸಂಪೂರ್ಣ ಹೊಣೆ ಹೊತ್ತಂತಾಯ್ತು.

ಉಪವೀತಕ್ಕೆ ಬ್ರಹ್ಮಸೂತ್ರ ಎಂಬ ಹೆಸರಿದೆ. ಈ ಪದವನ್ನು ಆರುಣಿಕೋಪನಿಷತ್ ಹೀಗೆ ವಿವರಿಸಿದೆ. **"ಸೂಚನಾತ್ ಸೂತ್ರಂ"**. ಬ್ರಹ್ಮ ವಸ್ತುವಿನ ಸೂಚನೆ ನೀಡುತ್ತದೆ. ಹಾಗಾಗಿ ಶರೀಫರ ಜೀವನದಲ್ಲಿ ಅನಿರೀಕ್ಷಿತವಾಗಿ ಪ್ರಮುಖವಾದ ತಿರುವು ಬಂದಂತಾಯ್ತು. ಆ ಕ್ಷಣದಲ್ಲಿ ಅನುಭವಿಸಿದ ಧನ್ಯತೆಯನ್ನು, ಗುರುವಿನ ಕರುಣೆಯ ಮಳೆಯನ್ನು, ಜನಿವಾರದ ಮಹಾತ್ಮೆಯನ್ನು ಹಾಡಿಹೊಗಳುತ್ತಾರೆ.

*ಹಾಕಿದ ಜನಿವಾರವಾ, ಸದ್ಗುರುನಾಥ*
*ಹಾಕಿದ ಜನಿವಾರವಾ।*

*ಹಾಕಿದ ಜನಿವಾರ*
*ನೂಕಿದ ಭವಭಾರ*
*ಬೇಕೆನುತಲಿ ಬ್ರಹ್ಮಜ್ಞಾನ ಉಚ್ಚರಿಸೆಂದು ॥*

*ಮುಸುಕಿದ ವ್ಯಸನದ ಕಸರನು ಕಳಿಯೆಂದು*
*ಹಸನಾಗಿ ಮೂಲ ಮಂತ್ರದ ಮನಿಯೊಳುನಿಂದು ॥*

ಗೋವಿಂದಭಟ್ಟರು ಶರೀಫರಿಗೆ ಜನಿವಾರ ಹಾಕಿದ್ದು ಇತರ ಬ್ರಾಹ್ಮಣರ ಬಾಯಿ ಮುಚ್ಚಿಸಲು ಅಲ್ಲ. ಯಾವ ಪ್ರತಿಭಟನೆಯೂ ಅಲ್ಲ. ಜನಿವಾರದ ಬಗ್ಗೆ ತಿರಸ್ಕಾರವೂ ಅಲ್ಲ. ಆ ಸಂಸ್ಕಾರದ ಯಥಾವತ್ ಉದ್ದೇಶವನ್ನು ಪೂರೈಸಲು ಶರೀಫರಿಗೆ ಉಪನಯನ ಮಾಡಿದ್ದಾರೆ. ಭವದ ಭಾರ

ಕಳೆದು, ಹಗುರಮಾಡಿ, ಬ್ರಹ್ಮೋಪದೇಶ ಮಾಡಿ, ಸಂಧ್ಯಾವಂದನೆ ಕಲಿಸಿ, ಯಮನ ಭಯವನ್ನಳಿಸಿ, ಆನಂದ ಬಿಂದುವಿನಲಿ ನೆಲೆಗೊಳಿಸಿ. . . . ಶರೀಫರಿಗೆ ಗುರುವಿನ ಉಪಕಾರ ಹೇಳಿದಷ್ಟು ಮುಗಿಯದು. ತಾಂತ್ರಿಕಪದ್ಧತಿಯಂತೆ ನೀಡುವ ಮಂತ್ರದೀಕ್ಷೆಯನ್ನು , ಆದರಿಂದ ಉಂಟಾದ ವಿಶೇಷಾನುಭವವನ್ನು ವರ್ಣಿಸುತ್ತಾರೆ.

*ಸದ್ಗುರು ನಿನ್ನ ಮಾಯಕ್ಕೆ ಮರುಳಾದೆನೋ ।*
*ಕರಪಿಡಿದೆಳೆದೆನ್ನ ಕರಣದೊಳೂದಲು*
*ವರ ಮಂತ್ರಧ್ವನಿ ಕೇಳಬ್ಬರಿಸಿ ಎದ್ದೆನೋ ।*
*ಮಸ್ತಕ ಪಿಡಿದೆತ್ತಿ, ಹಸ್ತದಿ ತಕ್ಕೈಸಿ*
*ದುಸ್ತರ ಭವ ಬಾಧೆ ಕಸಿದು ಬಿಸಾಕಿದಿ।*
*ಸರಸ ಪದಾರ್ಥ ಪಾತ್ರೆಯ ತುಂಬಿ ಕೊಡುತಿರೆ*
*ಹರುಷದಿ ಸೇವಿಸಿ ಸುಖಿಸಿದೆನೋ । (೪೦)*

ರಾಮಕೃಷ್ಣ ಪರಮಹಂಸರು, ದೇವರೆಲ್ಲಿ? ತೋರಿಸುವಿರಾ? ಎಂದು ಕೇಳಿದ ನರೇಂದ್ರನಿಗೆ ಸ್ಪರ್ಶಮಾತ್ರದಿಂದ ದೈವಾನುಭವವನ್ನು ನೀಡಿ ವಿವೇಕಾನಂದನನ್ನಾಗಿ ಪರಿವರ್ತಿಸಿದಂತೆ. ಶಿಷ್ಯನ ಹಸ್ತವನ್ನು ದೃಢವಾಗಿ ಹಿಡಿದು, ಕರ್ಣದ ಮೂಲಕ ಮಂತ್ರವನ್ನು ಕೇಳಿಸುತ್ತಿರುವಂತೆಯೇ ಅಂತಃಕರಣವನ್ನು ಪ್ರವೇಶಿಸುತ್ತಾನೆ ಗುರು. ಮಂತ್ರದ ಬಹಿರ್ಧ್ವನಿಯು ಅಂತರ್ನಾದವಾಗಿಯೂ ಕೇಳುವಂತೆ ಮಾಡುತ್ತಾನೆ. ಸುಷುಪ್ತಿಯಿಂದ ಜಾಗೃತಿಗೆ ತರುತ್ತಾನೆ. ನೆತ್ತಿಯ ಮೇಲೆ ಕೈಇಟ್ಟು ಆ ಕಪಾಲ ಪಾತ್ರೆಯಲ್ಲಿ ಆನಂದವೆಂಬ ಅಮೃತರಸ ತುಂಬಿಸಿ ದಿವ್ಯಾನುಭೂತಿಯನ್ನು ದೊರಕಿಸಿ ಕೊಡುತ್ತಾನೆ. ಇಂತಹ ಪರಮ ಯೋಗ್ಯ ಗುರುವನ್ನು ಶರೀಫರು ಹೊಗಳುವ ಪರಿ ಹೀಗೆ –

*ಗುರುವೆಂದರೆ ನಿಜಕೆ ಈತನೇ*
*ದೊರೆಯೆಂದರು ನಿಜಕೆ ಈತನೇ ।*
*ದಿಟವ ಹುಸಿದು ಬೆದಕಿ ನೋಡಿ*
*ನಟನೆ ಇರದ ಹಾದಿ ತೋರಿ*
*ಕಟಕಿನುಡಿಗೆ ಬಾಗದಿರುವ – ಏನುದಿಟ್ಟ ॥*

*ಸಣ್ಣ ಮಗುವಿನಂತೆ ಮಾಟ*
*ಕಣ್ಣಿನಾಚೆ ಕಂಡ ನೋಟ*
*ಬಣ್ಣ ಬಣ್ಣ ಮಂದಿಮಧ್ಯೆ*
*ತಣ್ಣಗಿದ್ದು ತುಸುವು ಕೆಡದೆ*
*ತನ್ನ ನಿಜದ ಧ್ಯಾನ ನಡೆಸುವ – ಏನು ದಿಟ್ಟ॥ (215)*
*ಯಾರ ಪರವಿ ಇವಗೆ ಇಲ್ಲ*
*ಯಾರು ಇವಗೆ ಹಿರಿಯರಿಲ್ಲ*
*ಮಾರಿಗೇಡು ಮಾಡಲೆಂದು*
*ನೂರು ಅಡ್ಡಿ ಮಾಡಿ ಏನು*
*ದಾರಿ ಬಿಡದೆ ನಡೆವ ಧೀರನು . . ಶಿಶುನಾಳಾಧೀಶ ॥*

ಈ ರೀತಿಯ ನಿರ್ಮಲಸ್ವರೂಪದ, ಈ ಜ್ಞಾನದ, ಈ ದಯದ ಮೂರ್ತಿಯೇ ನಿಜವಾದ ಗುರು. ಭಯರಹಿತ, ನಿಗ್ರಹಾನುಗ್ರಹಸಮರ್ಥನಾದ್ದರಿಂದ ದೊರೆಯೂ ಹೌದು. ಲೋಕದ ಸಾಮ್ರಾಜ್ಯಾಧಿಕಾರಕ್ಕೆ ಶತ್ರುಗಳಿಂದ, ಸೋಲಿನಿಂದ ಭಯವಿದೆ. ಆದರೆ ಆತ್ಮಸಾಮ್ರಾಜ್ಯಾಧಿಪತಿಗೆ ಅದಾವ ಭೀತಿಯೂ ಇಲ್ಲ. ಸತ್ಯಾಸತ್ಯ, ನಿತ್ಯಾನಿತ್ಯ, ಆತ್ಮಾನಾತ್ಮಗಳ ವಿಮರ್ಶೆ, ವಿವೇಕ ಪಡೆದವ. ಕಪಟ –ವಂಚನೆಗಳಿಲ್ಲದ ದಾರಿ ಆತನದು. ನಿಂದೆ–ಭರ್ತ್ಸನೆಗಳಿಗೆ ಬಾಗದವ. ಮಾತು –ವರ್ತನೆಗಳು ಕೂಸಿನಂತೆ ಮುಗ್ಧ–ನಿಷ್ಕಲ್ಮಶ. ದೃಶ್ಯವಾದುದಕ್ಕಿಂತ ಅತೀತದ ಕಡೆಗೆ ನೋಟ. ನಾನಾವಿಧ ಗುಣ–ಸ್ವಭಾವಗಳ, ಸುಜನ–ದುರ್ಜನರ ನಡುವೆ ಇದ್ದೂ, ನಿಂದೆ–ಪ್ರಶಂಸೆಗಳಿಗೆ ಪ್ರತಿಕ್ರಿಯೆ ನೀಡದೆ ತಣ್ಣಗಿರುವ, ಚಂಚಲನಾಗದೆ, ಬಾಹ್ಯ ಪ್ರಚೋದನೆಗಳಿಂದ ತನ್ನ ಧ್ಯಾನದ ಮನೋವೃತ್ತಿ ಕೆಡಿಸಿಕೊಳ್ಳದೆ ಇರುವ, ಅರಿವಿನಿಂದ ಹಿರಿಯನಾದವ. ಮಾನಾಪಮಾನಗಳಿಂದ ಧೈರ್ಯಗೆಡದೆ, ದಂಭ – ಅಹಂಕಾರಗಳಿಂದ ಸೊಕ್ಕದೆ ಅಧ್ಯಾತ್ಮದ ಪಥವ ಬಿಡದೆ ನಡೆವ ಧೀರ – ಗುರು.

**"ದಾರಿ ಬಿಡದೆ ನಡೆವ ಧೀರ"** ಎಂಬುದಕ್ಕೆ ಕಠೋಪನಿಷತ್ತಿ[2]ನಲ್ಲಿ ಒಂದು ಉಲ್ಲೇಖವಿದೆ. ಸರ್ವಭೂತಗಳ ಅಂತರಾತ್ಮನಾದ ಒಬ್ಬನೇ, ಬಹುರೂಪ ತಾಳುತ್ತಾನೆ. ಅವನೇ ತನ್ನಲ್ಲೂ ಆತ್ಮವಾಗಿದ್ದಾನೆ ಎಂದು ತಿಳಿದವನೇ ಧೀರ. ಅವನಿಗೆ ಮಾತ್ರ ಶಾಶ್ವತ ಸುಖ, ಶಾಶ್ವತ ಶಾಂತಿ.

"ಮಣಿ ಮಾಲಿಕೆ ಕೊಟ್ಟನೋ ಸದ್ಗುರುನಾಥ" ಎಂಬ ಪದದಲ್ಲಿ ಸನ್ಯಾಸದೀಕ್ಷವನ್ನು ಪಡೆದ ಬಗ್ಗೆ ಶರೀಫರು ವಿವರಿಸಿದ್ದಾರೆ. ಪ್ರಣವ ಪಂಚಾಕ್ಷರಗಳನ್ನು ಎಣಿಸಿ ಜಪಮಾಡೆಂದು ರುದ್ರಾಕ್ಷ ರತ್ನಮಣಿಗಳನ್ನು ಚಿನ್ನದ ಎಳೆಯಲ್ಲಿ ಪೋಣಿಸಿದ ಮಾಲೆಯನ್ನು ಗುರು ನೀಡಿದ. ಅಪಾರ ಕರುಣೆಯಿಂದ ಮೈಮುಟ್ಟಿ ಹರಸಿದ. ಅಷ್ಟೇ ಅಲ್ಲ,

*ಕರದಿ ಕೈ ದಂಡಕೋಲು ಕೊಟ್ಟನು ತಾ*
*ವರಕಾವಿಶಾಟಿ ಶಾಲು*
*ಧರೆಯೊಳು ಶಿಶುನಾಳಧೀಶ ತರಲಘಟ್ಟ*
*ವರಫಕೀರಾಗೆಂದು ವರವಿತ್ತು ಎನಗೆ (೩೭)*

ಸನ್ಯಾಸಿಗಳು ಕರದಲ್ಲಿ ಹಿಡಿವ ದಂಡ ಸಂಕೇತಾರ್ಥ ಉಳ್ಳದ್ದು.ಕಾಯ–ವಾಕ್–ಮನ ಎಂಬ ತ್ರಿಕರಣಗಳನ್ನು ದಮನ ಮಾಡುವುದು.[8] ಅಂದರೆ ನಿಷಿದ್ಧಕಾರ್ಯಗಳಲ್ಲಿ ತೊಡಗದಂತೆ ತಡೆಯುವುದು. ಅದಕ್ಕಾಗಿ ಯತಿಗಳಿಗೆ **ತ್ರಿದಂಡೀ** ಎಂಬ ಹೆಸರಿದೆ. ಅದರೊಂದಿಗೆ ಕಾಷಾಯ ವಸ್ತ್ರವು ತ್ಯಾಗಜೀವನದ ಕುರುಹಾಗಿ ಧರಿಸಲ್ಪಡುತ್ತದೆ. ಬಾಹ್ಯದ ಈ ಭೂಷಣಗಳನ್ನು ಕೊಟ್ಟ ಗುರು, ಶ್ರೇಷ್ಠನಾದ ಫಕೀರನಾಗೆಂದು ಆಶೀರ್ವದಿಸುತ್ತಾನೆ. ಫಕೀರನೆಂದರೆ ಸಂನ್ಯಾಸಿ – ಯತಿಯಷ್ಟೇ ಅಲ್ಲ. ಆಸೆಗಳನ್ನು ಬಿಟ್ಟವನು ಸ್ಥಾನ – ಮಾನ– ಸಂಪತ್ತುಗಳನ್ನು ತಿರಸ್ಕರಿಸುವವನು.[9]

'ಸ್ವಾಮಿ ರಾಮ'ರು ತಮ್ಮ **'ಹಿಮಾಲಯದ ಮಹಾತ್ಮರ ಸನ್ನಿಧಿಯಲ್ಲಿ'** ಎಂಬ ಗ್ರಂಥದಲ್ಲಿ ಒಂದು ಘಟನೆ ಉಲ್ಲೇಖಿಸುತ್ತಾರೆ.[೧೦] ಅತಿ ಶ್ರೀಮಂತನೊಬ್ಬ ನೀಮ್‌ಕರೋಲಿಬಾಬಾ ಎಂಬ ಸಾಧುಗಳ ಭೇಟಿ ಮಾಡಿ ಭಕ್ತಿಯ ಕಾಣಿಕೆಯಾಗಿ ದುಡ್ಡಿನ ನೋಟುಗಳ ರಾಶಿಯನ್ನೇ ಸುರಿಯುತ್ತಾನೆ. ಆದನ್ನೆಲ್ಲ ಹರಡಿ ಕುಳಿತು ನೋಡಿ, ಇದರಲ್ಲಿ ಮಲಗಲು ಸಾಧ್ಯವಿಲ್ಲ. ಬೆಂಕಿಗೆ ಹಾರಿ ಮೈ ಕಾಯಿಸೋಣ ಎಂದರೆ ಹತ್ತಿರದಲ್ಲಿ ಬೆಂಕಿಯೂ ಇಲ್ಲ ಎಂದು ತಿರಸ್ಕರಿಸುತ್ತಾರೆ. ಹೀಗೆ **ಸಮಲೋಷ್ಟ ಕಾಂಚನ**ರು ಅಂದರೆ ಚಿನ್ನವನ್ನು ಕಲ್ಲನ್ನು ಒಂದೇ ಎಂದು ಭಾವಿಸಿದವರು ಫಕೀರರು. ಗೋವಿಂದ ಭಟ್ಟರು ಹಾಗೂ ಶರೀಫರು ಇದೇ ಮನೋಧರ್ಮದ ಫಕೀರರು. ವಿರಕ್ತಿಯೇ ಅವರ ಮಹತ್ತಾದ ಬಲ.

ಶರೀಫರ ಗುರುಭಕ್ತಿ ತಮ್ಮ ಗುರುಗಳಲ್ಲಿ ಮಾತ್ರವಲ್ಲ. ಇತರ ಮಹಿಮಾವಂತರನ್ನು ಕೂಡ ಗುರುಸ್ಥಾನಗಳೆಂದು ಭಾವಿಸಿ ಗೌರವಿಸಿದ್ದಾರೆ. ಹಜರೇಶಾ ಖಾದರಿ, ಅಲ್ಲಮ ಪ್ರಭು, ಫಕೀರ ಸ್ವಾಮಿ, ಶಿವಯೋಗಿ ಸಮರ್ಥ, ಉಳವಿ ಚೆನ್ನ ಬಸವ, ಶಂಕರಾಚಾರ್ಯ, ಹೇಮರೆಡ್ಡಿ ಮಲ್ಲಮ್ಮ ಮುಂತಾದವರನ್ನು ತಮ್ಮ ಕೃತಿಗಳಲ್ಲಿ ಆದರದಿಂದ ಸ್ತುತಿಸಿದ್ದಾರೆ. ಒಂದು ಉದಾಹರಣೆ ಹೀಗಿದೆ.

*ಶಂಕರನೆ ಅವತರಿಸಿ ಧರಣಿಗೆ*
*ಶಂಕರಾಚಾರ್ಯಾಗಿ ಬಂದನು*
*ಪಂಕವನು ತೊಳೆದೆಲ್ಲ ಮನಸಿನ ಬಿಂಕವನು ಬಿಡಿಸಿ।*
*ಕಿಂಕರರ ಪಾವನವ ಮಾಡಿದ*
*ಶಂಕೆಯಿಲ್ಲದ ಪದದೊಳಿಟ್ಟನು*
*ಡೊಂಕುಹಾದಿಯ ಬಿಡಿಸಿ ಕಲಿಯುಗದಲ್ಲಿ ಗುರುವಾದ ॥*

*ಉಣ್ಣದೂಟವ ಉಣಿಸಿದನು ಗುರು*
*ತನ್ನ ಶಿಷ್ಯರ ಗುಣವ ನೋಡದೆ*
*ಮನ್ನಣೆಯ ಕೊಟ್ಟವರ ಈ ಭವಜಲಧಿ ದಾಂಟಿಸಿದ ।*
*ಇನ್ನು ಗುರುವಿಗೆ ಸರಿಯಗಾಣೆನು*
*ಬೆನ್ನು ಬಿದ್ದಂಥವರ ರಕ್ಷಿಪ*
*ಉನ್ನತೋನ್ನತ ಮಹಿಮೆ ಪಾಮರ ನುಡಿಯಲೆನ್ನಳವೆ ॥ (೨೭೨)*

ಭಕ್ತಿಯ ವೈವಿಧ್ಯಮಯನಿರೂಪಣೆಗಳಲ್ಲಿ ಶರೀಫರ ತತ್ತ್ವಪದಗಳು ಸಮಕಾಲೀನ ಪರಂಪರೆಗೆ ಅನುಗುಣವಾಗಿಯೇ ಇದೆ. ಶರೀಫರಲ್ಲಿದ್ದ ಭಕ್ತಿ ಅವರನ್ನು ದೇವರಿಗೆ ಪ್ರಿಯರನ್ನಾಗಿ ಮಾಡಿತು. ಸರ್ವಜೀವಿಗಳನ್ನು ಸಮಭಾವದಿಂದ ಕಾಣುತ್ತ, ಯಾರನ್ನು ದ್ವೇಷಿಸದ, ಸ್ನೇಹ ಮತ್ತು ಅನುಕಂಪದಿಂದ ಎಲ್ಲರನ್ನು ಕಾಣುವ, ತಾನು – ತನ್ನದು ಎಂಬ ಸಂಕುಚಿತಮನೋವೃತ್ತಿ ಇಲ್ಲದ ವ್ಯಕ್ತಿಯೇ ನಿಜಭಕ್ತ. ಈ ಧರ್ಮಗಳನ್ನು ಪರಿಪಾಲಿಸುವನು ದೇವರ ಪ್ರಸನ್ನತೆಗೆ ಕಾರಣವಾಗುತ್ತಾನೆ.

*****

ಟಿಪ್ಪಣಿ

೧) ಭಗವದ್ಗೀತೆ – ೧೦–೪೧ ಭಕ್ತಿ ಯೋಗ

೨) ಡಾ: ಎನ್. ಎಸ್. ಲಕ್ಷ್ಮೀನಾರಾಯಣಭಟ್ಟ. ಶಿಶುನಾಳ ಶರೀಫ್ ಸಾಹೇಬರ ಗೀತೆಗಳು

ಮುನ್ನುಡಿ ಪು –೧೪

೩) ಭಗವದ್ಗೀತೆ – ಭಕ್ತಿಯೋಗ

೪) ವಿವೇಕ ಚೂಡಾಮಣಿ – ೩೯ ಶಂಕರಾಚಾರ್ಯ

೫) ಜ್ಞಾನ ವಿಜ್ಞಾನ ಯೋಗ –೧೬

೬) ಕರ್ನಾಟಕದ ಸೂಫಿಗಳು – ರಹಮತ್ ತರೀಕೆರೆ

ಪುಟ –೧ ಸೂಫಿ ದೀಕ್ಷೆಯ ಕುರುಹುಗಳಾದ ಶೈಲಿ – ಶಮಲ– ಶಿಲೇಮನಿ ಗಳನ್ನು ಕೊಟ್ಟು ಗೌರವಿಸುತ್ತಾನೆ. ಪುಟ ೭೬ – ಶೈಲಿ – ಶಮಲ – ಶಿಲೇಮನಿ ಪಡೆಯುವುದು ಎಂದರೆ ಸೂಫಿ ಗುರುವಿನಿಂದ ಸಾಧನೆ ಮುಗಿದ ಶಿಷ್ಯನು ಖಿಲಾಫತ್ ಪಡೆಯುವುದು, ಖಲೀಫನಾಗುವುದು.

ಪುಟ – ೮೯ ಶಮಲ ಎಂದರೆ ಕೇಸರಿ ಅಂಗವಸ್ತ್ರ. ಶಿಲೇಮನಿ ಬಹುಶ: ಜಪದಸರ.

೭) ಕಠೋಪನಿಷತ್ತು: ೩ –೧೨

ತಂ ಆತ್ಮಸ್ಥಂ ಯೇನುಪಶ್ಯಂತಿಧೀರಾ :

ತೇಷಾಂ ಸುಖಂ ಶಾಶ್ವತಂ ನೇತರೇಷಾಮ್ ॥

೮) ಶ್ರೀವತ್ಸ ನಿಘಂಟು ಪುಟ ೧೬೮

ವಾಗ್ದಂಡ ಕರ್ಮದಂಡ ಮನೋದಂಡ (ವಾಯುಪುರಾಣಮ್ – ೧–೧೭–೬)

೯) ಫಕೀರ ಎಂದರೆ ಗತಿಯಿಲ್ಲದ ಬಡವ ಎಂದರ್ಥವಲ್ಲ. ಸಂಪತ್ತಿನಲ್ಲಿ ಆಸಕ್ತಿ ಇಲ್ಲದವನು. ಲೌಕಿಕ ವಿರಕ್ತಿ ಹಾಗೂ ಸಂಪತ್ತಿನ ತುಚ್ಛೀಕರಣ. ಕರ್ನಾಟಕದ ಸೂಫಿಗಳು ಪುಟ – ೧೩೬

೧೦) ಹಿಮಾಲಯದ ಮಹಾತ್ಮರ ಸನ್ನಿಧಿಯಲ್ಲಿ – ಪುಟ ೧೧೬

# ಅಧ್ಯಾಯ- ೫

೫.೧ ಆಧ್ಯಾತ್ಮಸಾಧನೆಯಲ್ಲಿ ಯೋಗಮಾರ್ಗ - ಸಾಂಪ್ರದಾಯಿಕನಿರೂಪಣ

೫.೨ ಚಿತ್ತವೃತ್ತಿನಿರೋಧ ಹಾಗೂ ಧ್ಯಾನಯೋಗ - ಶರೀಫರ ವಿಚಾರಗಳು

# ಅಧ್ಯಾಯ –೫
# ಅಧ್ಯಾತ್ಮಸಾಧನೆಯಲ್ಲಿ ಯೋಗಮಾರ್ಗ

## ೫.೧. ಯೋಗದ ಸಾಂಪ್ರದಾಯಿಕನಿರೂಪಣೆ:

ಪ್ರಕೃತಿಯ ಪಂಚಮಹಾಭೂತಗಳು, ಸತ್ತ್ವ–ರಜ–ತಮೋಗುಣಗಳು ಪ್ರಭಾವ ಬೀರಿ ಜೀವನನ್ನು ಬಂಧಿಸುತ್ತವೆ. ಅಜ್ಞಾನದಿಂದ ಪ್ರಕೃತಿಯೊಡನೆ ತಾದಾತ್ಮ್ಯಭಾವ ಹೊಂದಿದ ಜೀವನು ಭೌತಿಕಜೀವನದ ಬಲೆಯಲ್ಲಿ ಸಿಲುಕಿಕೊಂಡು ತನ್ನ ಯಥಾರ್ಥವಾದ ಆಧ್ಯಾತ್ಮಿಕಲಕ್ಷಣವನ್ನು ಮರೆಯುತ್ತಾನೆ. ಯೋಗವು ವಿಚಾರಪೂರ್ವಕವಾದ ಜ್ಞಾನದ ಸಾಧನೆಯಿಂದ ಬಂಧನವನ್ನು ಬಿಡಿಸಿಕೊಟ್ಟು ಆತ್ಮಸಾಕ್ಷಾತ್ಕಾರ ಮಾಡಿಸುತ್ತದೆ.

ಬೆಂಕಿಯನ್ನು ಹೊಗೆ ಮರೆಯಿಸುವಂತೆ, ಧೂಳಿನ ಲೇಪ ಕನ್ನಡಿಯ ಹೊಳಪನ್ನು ಮಸುಕು ಮಾಡುವಂತೆ, ಶಿಶುವನ್ನು ಗರ್ಭಕೋಶ ಆವರಿಸಿಕೊಂಡಂತೆ ಅಜ್ಞಾನವು ಜೀವನನ್ನು ಮುಸುಕುತ್ತದೆ.[೧] ಈ ಅಜ್ಞಾನದ ಆಶ್ರಯಸ್ಥಾನವೆಂದರೆ ದಶೇಂದ್ರಿಯಗಳು ಮತ್ತು ಮನಸ್ಸು. ಹಾಗಾಗಿ ಮೊದಲಿಗೆ ಇಂದ್ರಿಯಗಳನ್ನು ನಿಯಂತ್ರಿಸಬೇಕು.

ಮಹರ್ಷಿಪತಂಜಲಿವಿರಚಿತಯೋಗಸೂತ್ರ ತಿಳಿಸುವಂತೆ ಯೋಗವೆಂದರೆ ಚಿತ್ತವೃತ್ತಿ ನಿರೋಧ. ಚಿತ್ತ ಒಂದೇ ಆದರೂ ಅದರ ವೃತ್ತಿಗಳು ಅನೇಕ. ಹಾಗಾಗಿ ಮನಸ್ಸು ವಿಭಿನ್ನರೂಪಗಳಲ್ಲಿ ಇರುವುದು ಕಾಣುತ್ತದೆ. ಅಂದರೆ ವ್ಯಗ್ರವಾದ, ಅದೃಢವಾದ, ರಾಗೋದ್ರಿಕ್ತವಾದ, ಅಹಂಕಾರ ಯುಕ್ತವಾದ, ಮೂಢವಾದ ರೂಪಗಳಿವೆ. ನಿಂದ್ಯವಾದ ಈ ರೂಪಗಳಂತೆ ಪ್ರಶಸ್ತ ಸ್ವರೂಪಗಳೂ ಇವೆ. ಏಕಾಗ್ರವಾದ, ಅಚಲವಾದ, ರಾಗದ್ವೇಷರಹಿತವಾದ, ಅಹಂ– ಮಮಗಳಿಲ್ಲದ, ವಿಚಾರಿಯಾದ ಉತ್ತಮ ರೂಪಗಳ ಚಿತ್ತವೂ ಇದೆ. ಯಾವುದೇ ಈ ರೂಪ ಸ್ಥಿರವಲ್ಲ. ನಿರಂತರವಾಗಿ ಬದಲಾಗುತ್ತ ಇರುತ್ತದೆ. ಆವೇಶಪರರು, ವ್ಯಗ್ರಚಿತ್ತರು, ಚಂಚಲಮನಸ್ಕರು, ಹಟಮಾರಿಗಳು, ವಿಚಾರ–ವಿಶ್ಲೇಷಣ ಪ್ರವೃತ್ತಿಯವರು, ನಂಬುವ, ನಂಬದ ಹೀಗೆ ಬಗೆಬಗೆಯ ಮನಃ ಸ್ವಭಾವದ ಜನರು ಲೋಕದಲ್ಲಿದ್ದಾರೆ. ಚಿತ್ತದ ವರ್ತನೆ ಎಷ್ಟೊಂದು ವಿಚಿತ್ರವೆಂದರೆ, ವಿಚಾರ, ಚಿಂತನ, ನಿದ್ರಾ, ಸ್ಮರಣ, ಪ್ರಮಾಣ, ಮಿಥ್ಯಾಜ್ಞಾನ, ವಿಕಲ್ಪ– ಈ ಎಲ್ಲ ಅವಸ್ಥೆಗಳಲ್ಲಿ ಆತ್ಮನನ್ನು ಸ್ವಂತ ಪ್ರವೃತ್ತಿಯಿಂದ ದೂರ ಮಾಡುವ ಪ್ರಯತ್ನ ನಡೆಯುತ್ತಲೇ ಇರುತ್ತದೆ. ಆದ್ದರಿಂದ ಅತೀತಜ್ಞಾನದ ಸಂಪಾದನೆಯ ಪ್ರಯತ್ನದ ಮೊದಲ ಹೆಜ್ಜೆಯಾಗಿ, ಅನುಭವಜಗತ್ತಿಗೆ ಮುಖಮಾಡಿ ನಿಂತ ಇಂದ್ರಿಯ–ಮನಗಳೆಂಬ ಜ್ಞಾನದ್ವಾರಗಳನ್ನು ಮುಚ್ಚುವುದು ಅತ್ಯವಶ್ಯಕ. ಏಕಾಗ್ರಧ್ಯಾನಕ್ಕೆ ಪ್ರಪ್ರಥಮವಾಗಿ ಅಡ್ಡಿ ಬರುವ ದೇಹ ಅಥವಾ ಮನಸ್ಸಿನ ವ್ಯಾಧಿ, ಆಲಸ್ಯ, ಸಂಶಯ, ಪ್ರಮಾದ,

ಚಾಪಲ್ಯ ಮತ್ತು ಸೋಲನ್ನು ಜಯಿಸಬೇಕು. ಆ ಪಥದಲ್ಲಿ ಸಾಗಲು ಬೇಕಾದ ಸಂಪತ್ತುಗಳನ್ನು ಸಂಗ್ರಹಿಸಬೇಕು. ಅನವರತ ಪ್ರಯತ್ನ ಮಾಡುತ್ತಿರಬೇಕು.

ಪ್ರತಿಯೊಬ್ಬ ಮನುಷ್ಯನಲ್ಲಿ ಎರಡು ಪರಸ್ಪರ ವಿರುದ್ಧ ಪ್ರವೃತ್ತಿಗಳಿವೆ.[?] ಒಂದು ಭೋಗ, ಇನ್ನೊಂದು ತ್ಯಾಗ. ಅಥವಾ ಅಭಿನಿವೇಶ ಮತ್ತು ಮುಮುಕ್ಷುತ್ವ. ಸಾಮಾನ್ಯರಲ್ಲಿ ಭೋಗವು ಸುವ್ಯಕ್ತವಾಗಿ ತೋರಿದರೆ, ತ್ಯಾಗವು ಸುಪ್ತವಾಗಿದ್ದು, ಕೆಲವೊಮ್ಮೆ ಬಹಿರಂಗಕ್ಕೆ ಬರುತ್ತದೆ. ಯೋಗದ ಪ್ರಧಾನ ಧ್ಯೇಯವೆಂದರೆ ತ್ಯಾಗವನ್ನು ದೃಢ ಪಡಿಸುವುದು, ಬಲಗೊಳಿಸುವುದು. ಆಗ ಭೋಗಬುದ್ಧಿ ಕ್ಷೀಣವಾಗುತ್ತಾ ಹೋಗುತ್ತದೆ. ಚಿತ್ತದ ಬಹುವೃತ್ತಿಗಳನ್ನು ನಿಷೇಧಿಸಲು, ಭೋಗವನ್ನು ಬಿಟ್ಟು, ತ್ಯಾಗವನ್ನು ಸಾಧಿಸಲು ಅಭ್ಯಾಸ ಹಾಗೂ ವೈರಾಗ್ಯಗಳು ಅವಶ್ಯಕ.[?] ಯಮ–ನಿಯಮ– ಆಸನ–ಪ್ರಾಣಾಯಾಮ –ಪ್ರತ್ಯಾಹಾರ –ಧಾರಣ–ಧ್ಯಾನ–ಸಮಾಧಿ ಎಂಬ ಅಷ್ಟಾಂಗಯೋಗವನ್ನು ಅನುಷ್ಠಾನ ಮಾಡಬೇಕು. ವೈರಾಗ್ಯವನ್ನು ಬಿತ್ತಿ ಬೆಳೆಸಬೇಕು. ಶ್ರದ್ಧೆ ಮತ್ತು ಬ್ರಹ್ಮಚರ್ಯಗಳ ದೃಢ ಆಧಾರದಲ್ಲಿ ದೀರ್ಘಕಾಲದವರೆಗೆ ನಿರಂತರವಾಗಿ ಅಭ್ಯಾಸ ನಡೆಸಬೇಕು. ಯಮ ಎಂದರೆ ಸತ್ಯ, ಅಹಿಂಸೆ, ಬ್ರಹ್ಮಚರ್ಯ, ಅಸ್ತೇಯ, ಅಪರಿಗ್ರಹಗಳೆಂಬ ಬಹಿರ್ಮುಖವಾದ ವರ್ತನೆಗಳ ನಿಯಂತ್ರಣ. ನಿಯಮ– ಎಂದರೆ ಶುಚಿತ್ವ–ಸಂತೋಷ–ತಪ–ಅಧ್ಯಯನ ಮತ್ತು ಈಶ್ವರಾರ್ಪಣಬುದ್ಧಿ ಇವುಗಳಿಂದ ಮನುಷ್ಯನ ಅಂತರ್ಮುಖೀ ವರ್ತನೆಗಳು ಪರಿಶುದ್ಧವಾಗುತ್ತವೆ. ಹೀಗೆ ಅಂತರ್ಯದ ಹಾಗೂ ಬಾಹ್ಯದ ಸದಾಚಾರ, ಸಚ್ಚಿಂತನೆಗಳಿಂದ ಮೃಗೀಯವಾದ ಅಂಶಗಳನ್ನೆಲ್ಲ ತೊಳೆದುಕೊಂಡು ನಿಜವಾದ ಮನೀಷಿಯಾಗುತ್ತಾನೆ. ಜ್ಞಾನದ ಉನ್ನತ ಭೂಮಿಯನ್ನು ಏರುವ ಅರ್ಹತೆಗಳಿಸುತ್ತಾನೆ. ತಪಸ್ಸು–ಅಧ್ಯಯನಗಳಿಂದ ಮನೋಬುದ್ಧಿಗಳ ದಾರ್ಢ್ಯವನ್ನು ಮತ್ತು ದೇವನ ಪ್ರಭಾವ–ಪ್ರಸಾದಗಳಿಂದ ಪ್ರಾಣಾಯಾಮವೇ ಮೂಲವಾಗಿರುವ ಮಂತ್ರಯೋಗ – ಹಠಯೋಗ– ಲಯಯೋಗ –ರಾಜ ಯೋಗ ಎಂಬ ನಾಲ್ಕು ಯೋಗಗಳ ಸಾಧನೆಯಿಂದ ಮುಕ್ತಿಪದದ ಪ್ರಾಪ್ತಿಗೆ ಅಧಿಕಾರ ಗಳಿಸುತ್ತಾನೆ.[?]

ವೈರಾಗ್ಯವು ಇಹ–ಪರ ಸುಖಗಳೆಂಬ ಎರಡು ವಿಷಯದಲ್ಲೂ ಇರಬೇಕಾದ್ದು. ಇಂದ್ರಿಯಜನ್ಯವಾದ ಸಕಲಸುಖಗಳ ಅಪೇಕ್ಷೆ, ಪುತ್ರ – ಪತ್ನಿ – ಧನ– ಅಧಿಕಾರ ಇತ್ಯಾದಿಗಳು ಇಹಸುಖಗಳು. ಪುಣ್ಯಸಂಪಾದನೆಯಿಂದ ದೊರೆವ ಸ್ವರ್ಗ –ಪರ. ಇವೆರಡನ್ನೂ ಆಶಿಸದೆ ಇರುವುದೇ **'ವಶೀಕಾರ'** ಎಂಬ ಹೆಸರಿನ ವೈರಾಗ್ಯ.[?]

ಯೋಗಮಾರ್ಗಕ್ಕೆ ಒದಗುವ ಅಡಚಣೆಗಳು ಅನೇಕ. **ಅವಿದ್ಯೆ–ಅಸ್ಮಿತೆ –ರಾಗ–ದ್ವೇಷ – ಅಭಿನಿವೇಶ ಎಂಬ ಕ್ಲೇಶ ಪಂಚಕ** ಆಧ್ಯಾತ್ಮಿಕಜೀವನಪ್ರವೃತ್ತಿಗೆ ತಡೆಗಳು.[?] ಯೋಗದ

ಅನುಷ್ಠಾನದಿಂದ ಮೂಡಿದ ವಿವೇಕಖ್ಯಾತಿ ಇವುಗಳನ್ನು ನಿವಾರಿಸುವುದು. ವಿವೇಕಖ್ಯಾತಿ ಅಥವಾ ಯಥಾರ್ಥಜ್ಞಾನ ಕೇವಲ ಬೌದ್ಧಿಕತೆಗೆ ಸೀಮಿತವಾದುದಲ್ಲ. ತನ್ನೊಳಗೆ ಪ್ರಕಾಶಗೊಳ್ಳುವ ಅಪರೋಕ್ಷ ಅನುಭೂತಿ. ವಿದ್ಯಾಸಂಯೋಗ ಹಾಗೂ ದು:ಖವಿಯೋಗವೇ ಯೋಗ ಎಂದು ಅಭ್ಯಾಸ–ವೈರಾಗ್ಯಗಳಿಂದ ನಿಶ್ಚಯಿಸಿ ಅಶಿಥಿಲವಾದ ಯತ್ನಗಳಿಂದ ವಿವೇಕವನ್ನು ಸಾಧಿಸಿ ಕೊಳ್ಳಬೇಕು.[6]

ಯೋಗದ ಆಧ್ಯಾತ್ಮಿಕ ಹಿನ್ನೆಲೆಯಲ್ಲಿ ನಿಂತು ಗಮನಿಸಿದಾಗ ಗೀತೆಯಲ್ಲಿ ಉಕ್ತವಾದ ಕರ್ಮ –ಜ್ಞಾನ –ಭಕ್ತಿ –ರಾಜ ಯೋಗಗಳಲ್ಲದೆ, ಶಾಸ್ತ್ರಗಳಲ್ಲಿ, ಉಪನಿಷತ್ತುಗಳಲ್ಲಿ ಪ್ರತಿಪಾದಿತವಾದ ಹಠಯೋಗ – ಲಯಯೋಗ –ಶಿವಯೋಗ ಇತ್ಯಾದಿಯಾಗಿ ವಿಸ್ತಾರವಾಗಿ ಹರಡಿದ ಯೋಗ–ಪ್ರಪಂಚದ ಮಹತ್ತ್ವ ತಿಳಿಯುತ್ತದೆ. 'ಜೀವ –ದೇವ'ರ ಸಂಬಂಧಗಳನ್ನು ಅರಿತು, ಅನುಭವಿಸಿ, ಏಕೀಭವಿಸುವ ವಿಭಿನ್ನ ಮಾರ್ಗಗಳು–ಮಾದರಿಗಳು ಉಕ್ತವಾಗಿವೆ. ಮತ್ತು ಯಾವುದೇ ಸಂಪ್ರದಾಯ ಪರಿಶುದ್ಧವಾಗಿ ಅಥವಾ ನಿಯಮ ನಿಷ್ಠುರತೆಯಿಂದ ವ್ಯತ್ಯಾಸವಾಗದೆ ಉಳಿದಿಲ್ಲ. ನಾಥರು–ಸಿದ್ಧರು –ಸೂಫಿಗಳು–ಶಿವ ಶರಣರು–ತಾಂತ್ರಿಕ ಉಪಾಸಕರು ಇವರ ಸಾಧನಮಾರ್ಗಗಳೆಲ್ಲ ಸಮ್ಮಿಶ್ರ ಗೊಂಡಿವೆ. ವಿರೋಧ –ವಿವಾದಗಳೆಲ್ಲ ಅಲ್ಲಲ್ಲಿ ಕಂಡು ಬಂದರೂ ಕಾಲಕ್ರಮೇಣ ಸಾಮ್ಯತೆಯಿಂದ ಏಕತೆಯೂ ಉಂಟಾಗಿದೆ. ಹೆಚ್ಚಿನ ಯೋಗಸಾಧಕರು ದೇಶಾಂತರಗಳಲ್ಲಿ ಪರ್ಯಟನ ಮಾಡುತ್ತಿರುವುದರಿಂದ ತಾನಾಗಿ ಇತರರನ್ನು ಪ್ರಭಾವಿಸುತ್ತಾರೆ. ಹಾಗೆಯೇ ಪ್ರಭಾವಿತರೂ ಆಗುತ್ತಾರೆ. ಅನೇಕ ಪವಾಡಪುರುಷರ ಅನ್ಯೋನ್ಯಸ್ಪರ್ಧೆಗಳು, ಪರಿಣಾಮವಾದ ಸೋಲು ಗೆಲುವುಗಳು ಅದನ್ನೇ ತಿಳಿಸುತ್ತವೆ.[7] ಶರೀಫರ ಜೀವನವನ್ನು ಮತ್ತು ತತ್ತ್ವ ಪದಗಳನ್ನು ಪರಿಶೀಲಿಸಿದಾಗ ಸಂಕರದ ಅಥವಾ ಬೆರಕೆಯ ಹೊಳಹುಗಳು ಕಾಣಿಸುತ್ತವೆ.

### ೫.೩ ಚಿತ್ತವೃತ್ತಿ ನಿರೋಧ ಹಾಗೂ ಧ್ಯಾನ ಯೋಗ – ಶರೀಫರ ವಿಚಾರಗಳು.

ಮನಸ್ಸು ಹೊಂದುವ ಭಾವನೆಗಳು, ಗ್ರಹಿಸುವ ವಿಷಯಗಳು, ಮಾಡುವ ಯೋಚನೆಗಳು ಅಸಂಖ್ಯಾತ. ಆದ್ದರಿಂದ ಮನೋವೃತ್ತಿಗಳು ಅನೇಕ. ಇವುಗಳನ್ನು ಕ್ಲಿಷ್ಟ ಮತ್ತು ಅಕ್ಲಿಷ್ಟ ಎಂದು ಹೇಳಲಾಗಿದೆ. ಅವಿದ್ಯ–ಮೋಹ ಬಂಧನಗಳನ್ನು ವೃದ್ಧಿ ಪಡಿಸುವವು ಕ್ಲಿಷ್ಟಮನೋವೃತ್ತಿಗಳು. ಕಾಮ – ಭೋಗಗಳು ಪ್ರಿಯತರ ಎನಿಸುತ್ತವೆ. ಆದರೆ ಮೋಹವನ್ನುಂಟು ಮಾಡಿ ಜೀವನವನ್ನು ಬಂಧಿಸುತ್ತವೆ. ಅನುಕಂಪ– ಭೂತದಯೆ– ಕರುಣ ಇವೆಲ್ಲ ಅಕ್ಲಿಷ್ಟ ವೃತ್ತಿಗಳು. ಇವು ಮನಸ್ಸನ್ನು ಸ್ವಾತಂತ್ರ್ಯದ ಕಡೆಗೆ, ವಿದ್ಯೆಯ ಕಡೆಗೆ ಪ್ರಚೋದಿಸುತ್ತವೆ. ತನ್ನ ನಿಸ್ವಾರ್ಥತೆಯಿಂದ ಅಹಂಕಾರದ ಕಟ್ಟನ್ನು ಸಡಿಲಿಸುತ್ತವೆ. ಗೀತೆಯ ನುಡಿಯಂತೆ ಬಂಧ– ಮೋಕ್ಷಗಳಿಗೆ ಮನವೇ ಕಾರಣ. ಆಸೆ –

ರೋಷ, ಗರ್ವ, ಅಸೂಯೆ ಮುಂತಾದ ದುರ್ಭಾವನೆಗಳನ್ನು ಗೆಲ್ಲಬೇಕಾದರೆ ತೃಪ್ತಿ, ಪ್ರೀತಿ, ವಿನಯ, ಉದಾರತೆಗಳೆಂಬ ಸದ್ಭಾವನೆಗಳು ಬೆಳೆಯಬೇಕು. ಅಕ್ಲಿಷ್ಟವೃತ್ತಿಗಳ ಮೂಲಕ ಕ್ಲಿಷ್ಟವೃತ್ತಿಗಳನ್ನು ನಿಗ್ರಹಿಸಬೇಕು.

ಚಂಚಲವಾದ ಮನೋವೃತ್ತಿಯನ್ನು ಮಂಗನ ರೂಪಕವನ್ನಿತ್ತು ಶರೀಫರು ಬಣ್ಣಿಸುತ್ತಾರೆ.

*ಮಂಗನ ನೋಡಿದೆನೋ, ಅಡಗಿದ*
*ಮಂಗನ ನೋಡಿದೆನೋ ।*
*ರಂಗಿಲೆ ಬಂದೆನ್ನ*
*ಕಂಗೆಡಿಸಿತು ಮನ*
*ಹಂಗುದೊರೆದು ಅಂಜಿಸುತ್ತ ತಾನಿರುವಂಥ ।*
*ಸಿಂಗಳೀಕ ಎನಿಸಿ, ಪರಿಪರಿ*
*ಭಂಗಕೆನ್ನ ಎಳಸಿ*
*ಲಂಕಾಪುರವ ಬೆಂಕಿಲಿಸುಡಿಸಿದ ॥ (೨೫೬)*

ಇದು ಹೆದರಿಕಿಲ್ಲದ ಮಂಗ, ಕಲಿಯಲಾರದ ಮಂಗ ಮುಂತಾಗಿ ಮನಸ್ಸಿನ ಅಪ್ರತ್ಯಕ್ಷತೆ, ಚಾಂಚಲ್ಯ, ಬಂಧನಕರ ವೃತ್ತಿಯನ್ನು ಹಾಗೂ ನಿಗ್ರಹಿಸಲು ಆಗುವ ಕಷ್ಟವನ್ನು ಹಾಸ್ಯದ ಲೇಪದೊಂದಿಗೆ ಹೇಳಿದ್ದಾರೆ.

*ಮಾನಕ್ಕೆ ದಾನಕ್ಕೆ ಮಣಿಯದೆ, ಒಳಗಿನ*
*ಜ್ಞಾನಕ್ಕೆ ಒರೆನಿಂತು ಹರಿಯೆಲೋ ಮನಸೇ* – ಎಂಬಲ್ಲಿ

*ಅಳಿವುದು ಕಾಯ, ಉಳಿವುದು ಕೀರ್ತಿ, ತಿಳಿದುನೋಡಲೋ ರೀತಿ ,*
*ಬಿಡು ಅವಿಚಾರ ಮಾಡೋ ವಿಚಾರ ಸ್ಥಿರವಲ್ಲೋ ಈ ಸಂಸಾರ ಮರುಳೆ* ಎಂಬಲ್ಲಿ
ಕೂಡಾ ಕ್ಷಣ ಭಂಗುರವಾದ ವಿಷಯಕ್ಕೆ ಸೋಲದೆ ಇರುವಂತೆ ಎಚ್ಚರಿಸಿದ್ದಾರೆ.

ಶರೀಫರ ಅತ್ಯದ್ಭುತ ಪದ ಇದು. ಮನೆಯೆಂಬ ರೂಪಕವನ್ನಿತ್ತು ಶರೀರದ ಹಾಗೂ ಅರಿವಿನ ಕೊರತೆಯನ್ನು ಬಹುಚಮತ್ಕಾರವಾಗಿ ವಿವರಿಸಿದ್ದಾರೆ. ಗೇಯಗುಣದೊಂದಿಗೆ ವಿಷಾದವನ್ನೂ ವಿಚಾರವನ್ನೂ ಪ್ರೇರಿಸುವ ಪದ –

*ಸೋರುತಿಹುದು ಮನೆಯ ಮಾಳಿಗೆ, ಅಜ್ಞಾನದಿಂದ*
*ಸೋರುತಿಹುದು ಮನೆಯ ಮಾಳಿಗಿ ।*

*ಸೋರುತಿಹುದು ಮನೆಯ ಮಾಳಿಗಿ*
*ದಾರುಗಟ್ಟಿ ಮಾಳ್ಪರಿಲ್ಲ*
*ಕಾಳಕತ್ತಲೆಯೊಳಗೆ ನಾನು*
*ಮೇಲಕೇರಿ ಮೆತ್ತಲಾರದೆ ॥*

*ಮುರುಕು ಜಂತಿ ಹುಳುಕು ತೊಲೆಯು*
*ಮುರಿದು ಕೊರೆದು ಕೀಲಸರಿದು*
*ಮುರುಕು ಚಪ್ಪರ, ಜೇರುಗಿಂಡಿ*
*ಮೇಲಕೇರಿ ಮೆತ್ತಲಾರೆ ॥*

*ಗರಕಿ ಹುಲ್ಲು ಕಸವು ಹತ್ತಿ*
*ದುರಿತ ಭವದಿ ಇರವಿ ಮುತ್ತಿ*
*ಜಲದ ಭರದಿ ಸರಿಯೆ ಮಣ್ಣು*
*ಒಳಗೆ ಹೊರಗೆ ಏಕವಾಗಿ ॥ (೨೦೫)*

ಸಕಲಸಾಧನಸಂಪನ್ನವಾದ ಶರೀರವು ಉಪ್ಪರಿಗೆಯ ಮನೆಯಂತೆ. ದೇವರು ಕೊಟ್ಟ ಸಾಧನಗಳನ್ನು ಆತ್ಮೋದ್ಧಾರಕ್ಕೆ ವಿನಿಯೋಗಿಸದೆ ಬಿಟ್ಟುದನ್ನು, ಮನೆಪಾಳುಬಿದ್ದುದಕ್ಕೆ ಹೋಲಿಸಿದ್ದಾರೆ. ಸಡಿಲವಾದ ಇಂದ್ರಿಯಗಳು, ಕ್ಷಣಿಕವಾದ ಮನಸ್ಸು, ಅಸ್ಥಿರವಾದ ಬುದ್ಧಿಯನ್ನು ಮುರಿದ ತೊಲೆಗೆ, ಹುಳ ಹಿಡಿದಜಂತಿ, ಕೊರೆದು ಹೋದ, ಜಾರಿ ಹೋದ, ಕೀಲು ಸಡಿಲಿದ ಮನೆಗೆ ಹೋಲಿಸಿದ್ದಾರೆ. ಅನವಶ್ಯಕವಾದ ಆಸೆಗಳನ್ನು ಕಿತ್ತಷ್ಟು ಬೆಳೆಯುವ, ಶಾಖೋಪಶಾಖೆಗಳಾಗಿ ಹರಡುವ ಗರಿಕೆ ಹುಲ್ಲಿನಂತೆ–ಎಂದಿದ್ದಾರೆ. ಅಸೂಯೆ–ಕೋಪ ಮುಂತಾದ ದುರ್ಗುಣಗಳು ಕಸದಂತೆ, ಇರುವೆ ಮುತ್ತಿದಂತೆ ಎಂದು ಹೋಲಿಸಿದ್ದಾರೆ. ಶರೀರ ಮತ್ತು ಮನಸ್ಸು ನಿಷ್ಪ್ರಯೋಜಕವಾಗಿರುವುದನ್ನು ಮತ್ತು ಜೀವ–ಜೀವನಗಳು ನಿರರ್ಥಕವಾಗುವುದನ್ನು ಜಲದ ರಭಸಕೆ ಕರಗಿ ಹರಿದು ಹೋಗುವ ಮಣ್ಣು ಎನ್ನುತ್ತಾರೆ. ಈ ದುರವಸ್ಥೆಗೆ ಮೂಲ ಕಾರಣವಾಗಿದೆ ಒಳಗೂ ಹೊರಗೂ ತಾನೇ ತಾನಾಗಿ ವಿಜೃಂಭಿಸುತ್ತಿರುವ ಅಜ್ಞಾನವೆಂಬ  ಕಾಳ ಕತ್ತಲೆ. ಸಂಚರಿಸುವ ಸಮಯದಲ್ಲಿ ಶರೀಫರ ದೃಷ್ಟಿಗೆ ಬಿದ್ದ ಪಾಳುಮನೆ ಈ ಪದಕ್ಕೆ ಸ್ಫೂರ್ತಿಕೊಟ್ಟಿರಬೇಕು. ಈ ಪದ ಕೇಳಿದಾಗ ಪ್ರತಿಯೊಬ್ಬ ವಿಚಾರಿಯು ನಿಂತು ಚಿಂತಿಸಲೇ ಬೇಕು.

ನೋಡನೋಡುತ್ತಿರುವಂತೆ ದಿನರಾತ್ರಿಗಳು, ಮಾಸವರ್ಷಗಳು ಕಳೆದು ಹೋದರೂ ಮನುಷ್ಯ ಕೆಲವೊಮ್ಮೆ ಬುದ್ಧಿ ಕಲಿಯಲಾರ. ಕಣ್ಣೆದುರೇ ಅಳಿದು ಹೋಗುವ ವಸ್ತುಗಳನ್ನು ಕಂಡರೂ ತನ್ನ ನಶ್ವರತೆಯ ಬಗ್ಗೆ ಯೋಚನೆಯೇ ಬಾರದು.

*ಪ್ರಾಯ ಹೋಗುತ ಬಂತು*
*ದೇಹಒಣಗಿ ನಿಂತು*
*ಜೀವದ ಬಡಿದಾರ ಏನೆಂಬೆ !*

*ಸಾಯುವ ಗಳಿಗೇಲು*
*ಬ್ಯಾಳಿಯ ಚಿಂತೆಯೇ ?*
*ಸೋಲಬ್ಯಾಡೋ ಜೀವ ಎಂದೆಂಬೆ.*

ಇನ್ನಾದರೂ ಒಳಿತಿನ ಚಿಂತೆ ಯಾಕೆ ಮಾಡುತ್ತಿಲ್ಲ? ಗುರುವಿನ ಶರಣಾಗು, ದೇವರ ನಂಬು. ಜ್ಞಾನೋದಯವಾದೀತು ಎಂದು ಹಿತೈಷಿಯಾಗಿ ಶರೀಫರು ನುಡಿಯುತ್ತಾರೆ.

*ವಶ ಮಾಡಿ ಬುದ್ಧಿಯ*
*ಹತನಾಗಿ ಚಿಂತಿಸು*
*ಉಸಿರು ಗುರುವಿನ ನಾಮ ಎಂತೆಂಬೆ*
*ಮುಸುಕು ತೆಗೆದು ಇನ್ನು*
*ಶಿಶುನಾಳಾಧೀಶನ*
*ಎಸೆವ ಪಾದಕೆ ನೀ ನಮಿಸೆಂಬೆ*



ಮೃದುವಾದ ಭಾಷೆಯಲಿ, ಒಲಿಸುವ ತೆರದಲ್ಲಿ ತಿಳಿಸಿ ಹೇಳುವ ಶರೀಫರು ಕೆಲವೊಮ್ಮೆ ಒರಟಾಗಿ ಕೆಣಕುತ್ತಾರೆ. ಚುಚ್ಚು ಮಾತುಗಳನ್ನು ವ್ಯಂಗ್ಯದ ನುಡಿಗಳನ್ನು ಆಡಿ ಲಜ್ಜೆ ಪಡುವಂತೆ ಮಾಡುತ್ತಾರೆ. ಮಾಡಿದ ತಪ್ಪುಗಳನ್ನೆಲ್ಲ ಪಟ್ಟಿ ಮಾಡಿ ಹೇಳಿ ಮುಖ ಮುಚ್ಚಿಕೊಳ್ಳುವಂತೆ ನಿಂದಿಸುತ್ತಾರೆ. ಹಿಂದಿನ ಪದದಲ್ಲಿ ಉಕ್ತವಾದ 'ಜೀವದ ಬಡಿವಾರ' ವನ್ನು ಇನ್ನಷ್ಟು ವಿವರಿಸಿ ಸ್ಪಷ್ಟ ಪಡಿಸುತ್ತಾರೆ.

*ಮುದಿಕ್ಯಾಗ ಮರುಕ ಇನ್ಯಾಕ, ಖೋಡಿ*
*ಎದುರಿಗೆ ನಿರಿಗೇಯ ಒದೆವುದು ಸಾಕ ।*
*ಮೊದಲಿಗೆ ಮೂವರು ಕೂಡಿ, ಮಾಯಾ*
*ಮದನ ಮಂದಿರದೊಳು ಮುದದಿ ಮಾತಾಡಿ*
*ಹದಗೆಟ್ಟು  ಹಾದರ ಮಾಡಿ, ಮುಂದೆ*
*ಬದುಕಿನ  ಎಚ್ಚರ ನಿನಗಿಲ್ಲ ಖೋಡಿ।   (೧೧೨)*

ತಾರುಣ್ಯದಲ್ಲಿ ಹಾದಿಕೆಟ್ಟು ವರ್ತಿಸಿ, ಶೀಲಕ್ಕೆ ಊನತಂದು ಕೊಂಡರೂ, ಇಳಿ ವಯಸಿನಲ್ಲೂ ಬುದ್ಧಿಬಾರದ ಮುದುಕಿಯನ್ನು ನಿಂದಿಸುವಂತಿದೆ ಈ ಪದ. ಹೆಚ್ಚಿನ ಪದಗಳಲ್ಲಿ ಜೀವನನ್ನು ಸಖಿ, ತಂಗಿ ಮುಂತಾಗಿ ಸ್ತ್ರೀವಾಚಕವಾಗಿ ಸಂಬೋಧಿಸಿರುವ ಶರೀಫರು ಇಲ್ಲೂ ಮುದುಕಿ ಎಂದು ಜೀವನನ್ನು  ಕರೆದಿದ್ದಾರೆ. 'ಮೊದಲಿಗೆ ಮೂವರು ಕೂಡಿ' ಎಂಬಲ್ಲಿ ಶರೀರ –ವಾಕ್ –ಮನಗಳೆಂಬ ಕರಣ ತ್ರಯಗಳನ್ನು ದುರುಪಯೋಗ ಮಾಡಿದ ಸೂಚನೆ ಇದೆ. ಭವಿಷ್ಯತ್ತಿನ ಚಿಂತನೆ ಮಾಡದೆ ಇಷ್ಟ ಬಂದಂತೆ ವರ್ತಿಸಿದ ಬಗ್ಗೆ ಅಸಮಾಧಾನ ತೋರಿಸಿದ್ದಾರೆ.



*ಏಳೆಂಟು ಗೆಳತೀರ ಜತಿಗೆ – ಹಳ್ಳಿ*
*ಸೂಳೇರ ತೆರದಲಿ ತಿರುಗುತಿ ಬೀಗಿ*
*ಕಾಳ ಕತ್ತಲೆದಲ್ಲಿ ಅಲೆದು. ಗೊತ್ತೆ*
*ಹಾಳು ಗುಡಿಯೊಳು ಬಂದು ಬೀಳೋದು ಕತ್ತೆ ॥*

*ನರೆ ಹಾಯ್ತು ತೆಲಿಬೆಳ್ಳಗಾಯ್ತು, ಬುದ್ಧಿ*
*ಬರಲಿಲ್ಲ ಹಿರಿಕಿರಿಯರು ಹೇಳಿಯಾಯ್ತು*
. . . . . . .   ॥  (೧೧೨)

ಹುಟ್ಟುಗುಣ ಸುಟ್ಟರೂ ಬಿಡದು ಎಂಬಂತೆ ತಲೆ ಬೆಳ್ಳಗಾದರೂ ಬುದ್ಧಿ ಬರಲಿಲ್ಲ. ಹುಣಸೇ ಮರ ಮುಪ್ಪಾದರೆ ಹುಳಿ ಮುಪ್ಪೇ ಎಂಬಂತೆ ಅರಿಷಡ್ವರ್ಗದ, ಅಷ್ಟ ಮದಗಳ ಸಹವಾಸ ಬಿಟ್ಟುಹೋಗದು. ಮನಸ್ಸಿನ ಉಚ್ಛೃಂಖಲತೆಯನ್ನು ತಿಳಿಸಲೆಂದೇ ಈ ಪದ ರಚಿಸಿದ್ದಾರೆ.

ಹಾಗಿದ್ದರೆ ಮನಸ್ಸನ್ನು ಉಪಯೋಗಿಸಿಕೊಳ್ಳುವುದು ಹೇಗೆ? ಅದನ್ನು ಉಪಯೋಗಿಸಿ ತಿಳಿಯ ಬೇಕಾದ್ದೇನು? ಮುಂತಾದ ಪ್ರಶ್ನೆಗಳಿಗೆ ಉತ್ತರವಾಗಿದೆ ಈ ಪದ –

*ಮನಸೇ ಮನಸಿನ ಮನಸ ನಿಲ್ಲಿಸುವುದು*
*ಮನಸಿನ ಮನ ತಿಳಿಯುವ ಮನ ಬ್ಯಾರೆಲೋ ಮನಸೇ ।*

*ತನುತ್ರಯದೊಳು ಸುಳಿದಾಡುವ ಜೀವದ*
*ಗುಣವರಿತರೆ ನಿಜ ಬ್ಯಾರೆಲೋ ಮನಸೇ ।*

*ದಶದಿಕ್ಕಿಗೆ ಹಾರಾಡುವ ಹಕ್ಕಿಯು*
*ವಶವಾಗಲಾಪರಿ ಬ್ಯಾರೆಲೋ ಮನಸೇ ।*

*ಗೋವಿಂದ ಗುರುವಿನ ಚರಣ ಕಮಲದೊಳು*
*ಗಾನಗೈಯಲೋ ಭ್ರಮರಾಳಿಯ ಮನಸೇ ।*

*ವಿಷಯಗಳು ಸುಖ ಬಯಕೆ ಬಯಸಿ ಬಲು*
*ಕಸಿವಿಸಿ ಗೊಂಬುವುದೇತಕೋ ಮನಸೇ ।*

*ಇಳೆಯೊಳು ಶಿಶುನಾಳಾಧೀಶ ನಿರ್ಮಲನ*
*ತಿಳಿದರೆ ಒಳಹೊರಗೊಂದೆಲೋ ಮನಸೇ . । (೯೩)*

ಅರಿವನ್ನು ಸಂಪಾದಿಸುವ ಮಾಧ್ಯಮವಾದ ಅಂತಃಕರಣದಲ್ಲಿ ಶಾಸ್ತ್ರಕಾರರು ನಾಲ್ಕು ರೂಪಗಳನ್ನು ಗುರುತಿಸಿದ್ದಾರೆ. ಮನೋ–ಬುದ್ಧಿ –ಚಿತ್ತ–ಅಹಂಕಾರ ಎಂಬುದಾಗಿ. ಮನಸ್ಸು ಸಂಕಲ್ಪ–ವಿಕಲ್ಪಗಳ ಆಶ್ರಯ, ಸಂಶಯದ ನೆಲೆ. ಬುದ್ಧಿ ಎಂಬುದು ನಿಶ್ಚಯಾತ್ಮಕ. ಮನನ ಮಾಡುವುದು ಮನಸ್ಸು. ಜಡವಲ್ಲದೆ ಚೇತನಾರೂಪವಾದ್ದರಿಂದ ಚಿತ್ತ. (ಜೀವನ್ಮುಕ್ತಿ ವಿವೇಕ–ವಿದ್ಯಾರಣ್ಯ ಕೃತ) ಇವೆಲ್ಲ ಆತ್ಮನಿಷ್ಠಗುಣಗಳು. ತನ್ನ ಕರಣಗಳನ್ನು ಅಂದರೆ ಸಾಧನಗಳನ್ನು ಅವಿದ್ಯೆಯಿಂದಾಗಿ ತಾನೇ ಎಂದು ತಿಳಿಯುತ್ತಾನೆ (ಅಸ್ಮಿತ). ಸುಖ ದುಃಖಗಳನ್ನು ಅನುಭವಿಸುತ್ತಾ ರಾಗ–ದ್ವೇಷಗಳನ್ನು ಸಾಕುತ್ತಾನೆ. ಯಾವಾಗ ವಿವೇಕ ಮೂಡುತ್ತದೋ ಆಗ ತನ್ನ ಪ್ರತ್ಯೇಕತೆಯನ್ನು ಹಾಗೂ ನಿರ್ಲಿಪ್ತತೆಯನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ.

ಮನಸೇ ಮನಸಿನ ಮನಸ ನಿಲ್ಲಿಸುವುದು – ಪ್ರಾಯಶಃ ಚಂಚಲವಾದ ಮನಸ್ಸನ್ನು ನಿಶ್ಚಲವಾದ ಬುದ್ಧಿ ನಿಲ್ಲಿಸಬಲ್ಲುದು ಎಂದರ್ಥ. ಮನಸಿನ ಮನ ತಿಳಿಯುವ ಮನ ಎಂದರೆ ಮನೋಬುದ್ಧಿಗಳ ಅಂತರ್ಯದಲ್ಲಿ ಇನ್ನೇನೋ ಇದೆ ಎಂಬ ಸೂಚನೆ. ಸ್ಥೂಲ–ಸೂಕ್ಷ್ಮ–ಕಾರಣ ಎಂಬ ತನುತ್ರಯದಲ್ಲಿ ಸಂಚರಿಸುವ ಜೀವಾತ್ಮನ ನಿಜಸ್ವರೂಪವೆ ಬೇರೆ. ಆ ಆತ್ಮಜ್ಞಾನ ಬಯಸುವುದಾದಲ್ಲಿ, ವಿಷಯ ಸುಖಗಳೆಲ್ಲ ಪರಿಣಾಮದಲ್ಲಿ ದುಃಖವೆಂದು ಭಾವಿಸಿ ಜಗತ್ತಿನ ದಶದಿಕ್ಕುಗಳಲ್ಲಿ ಭ್ರಮಿಸುವ

ಮನವನ್ನು ನಿಯಂತ್ರಿಸಿ (ಪ್ರತ್ಯಾಹಾರ) ಧ್ಯಾನಕ್ಕೆ ತೊಡಗಿಸಬೇಕು. ಧ್ಯಾನ ಕಾರ್ಯಕ್ಕೆ ಧ್ಯೇಯ ವಸ್ತು ಯಾವುದೆಂದರೆ ಶ್ರೀ ಗುರುವಿನ ಚರಣಕಮಲ. ಶಂಕರ ವಿವೇಕ ಚೂಡಾಮಣಿಯಲ್ಲಿ ಹೇಳುತ್ತಾರೆ' – ಸಾಧನ ಸಂಪನ್ನನಾದ ಶಿಷ್ಯ. ಗುರುವನ್ನು ಆಶ್ರಯಿಸಿ ಜ್ಞಾನೋಪದೇಶಕ್ಕಾಗಿ ಯಾಚಿಸಬೇಕು ಎಂದು. ಆತ್ಮೀಯನೆಂದು ತಿಳಿದು, ಅಮೃತ ಸಮಾನವಾದ ಕಟಾಕ್ಷವನ್ನು ಬೀರಿ ಉದ್ಧರಿಸು ಎಂದು ಬೇಡಬೇಕು. ಶರೀಫರ ಅಭಿಮತವೂ ಅದೇ. ಜಜ್ಞಾಸೆ ಇರಬೇಕು, ಸಾಧನೆ ಮಾಡಬೇಕು, ಗುರುವಿನುಪದೇಶ ಬೇಕು. ಹಾಗಾದಾಗ ಆತ್ಮ ದರ್ಶನದಿಂದ "**ಒಳಹೊರಗೊಂದೆಲೊ ಮನಸೇ**". ನಿರ್ಮಲವಾದ ತತ್ತ್ವಜ್ಞಾನದಿಂದ, ಧ್ಯಾನ – ಧ್ಯಾತೃ– ಧ್ಯೇಯ ಎಂಬ ತ್ರಿಪುಟಿ ಅಳಿದು ಎಲ್ಲವೂ ಒಂದೇ ಆಗುತ್ತದೆ. ಆಮೇಲೆ ಒಳಗೆಂದಿಲ್ಲ, ಹೊರಗೆಂದಿಲ್ಲ.

ಚಿತ್ತವೃತ್ತಿನಿರೋಧವೆಂಬ ಯೋಗದಿಂದ ದು:ಖದ ಆತ್ಯಂತ ನಿವೃತ್ತಿ ಹಾಗೂ ಸತ್–ಚಿತ್ –ಆನಂದ ಸ್ವರೂಪನಾಗಿರುವ ಆತ್ಮನ ಅರಿವು ಸಾಧ್ಯ ಎಂಬ ತತ್ತ್ವಸಾರ ಈ ಪದದಲ್ಲಿ ಅಡಗಿದೆ.

ಜೀವನನ್ನು ಬಂಧಿಸುವ ಮನದ ಪಂಚ ವೃತ್ತಿಗಳಲ್ಲಿ ನಿದ್ರೆ ಕೂಡಾ ಸೇರಿದೆ–ಮನಸ್ಸು ವಿಷಯ ರೂಪಗಳನ್ನು ಅವಲಂಬಿಸಿ ನಿಂತಾಗ ಎಚ್ಚರವಾಗಿರುತ್ತದೆ. ತನ್ನ ಸಾಮರ್ಥ್ಯಕ್ಕೆ ಅನುಸಾರವಾಗಿ ವಸ್ತುವಿನ ಮಿಥ್ಯಾಜ್ಞಾನವನ್ನು, ವಿಕಲ್ಪಜ್ಞಾನವನ್ನು ಅಥವಾ ಯಥಾರ್ಥಜ್ಞಾನವನ್ನು ಪಡೆಯುತ್ತದೆ. ತಮೋಗುಣ ವರ್ಧಿಸಿದಾಗ, ಆಲಂಬನ ತಪ್ಪಿಹೋಗಿ ಮನಸ್ಸು ನಿದ್ದೆಗೆ ಒಳಗಾಗುತ್ತದೆ.[00] ಒಂದರ್ಥದಲ್ಲಿ ಸಮಾಧಿಸ್ಥಿತಿಯಂತೆ ವಿಷಯಭಾವರಹಿತವಾದ ಲಯರೂಪವೇ ನಿದ್ರೆ. ಆದರೆ ಈ ಲೀನಾವಸ್ಥೆ ವಿವೇಕದಿಂದ ಜನಿಸಿದ ಸ್ವರೂಪದ ಅರಿವಲ್ಲ. ಬದಲಾಗಿ ತಮೋಗುಣದ ಪ್ರಭಾವವಷ್ಟೇ. ಹಾಗಾಗಿ ನಿದ್ದೆಯಿಂದ ತಾತ್ಕಾಲಿಕವಾದ ಸುಖ ಶಾಂತಿ ದೊರೆಯುತ್ತದೆ. ಆತ್ಯಂತಿಕವಾದ ದು:ಖನಾಶ ಪಡೆಯಲಾಗದು. ಎಚ್ಚರವಾದಾಗ ಮತ್ತೆ ಸುಖದು:ಖ ದ್ವಂದ್ವ.

ಶರೀಫರು ಈ ನಿದ್ದೆಯನ್ನು ನಿಂದಿಸುವ ಬಗೆ ಹೀಗೆ –

*ನಿದ್ದೆಯೆಂಬ ನಿಜ ಹಾದರಗಿತ್ತಿ*
*ಬುದ್ಧಿ ಇಲ್ಲವೇ ನಿನಗೆ ?*
*ಸಿದ್ಧ ಜ್ಞಾನದೊಳಿದ್ದ ಗಳಿಗೆಯಲಿ*
*ಕದ್ದಡಗಿದಿ ಈ ಕಾಮದ ಮನಿಯೊಳು*
*ಎದ್ದು ನೋಡಿದರೆ ಎತ್ತ ಪೋದಿಯೆ?*
*ನಿದ್ದೆ ಇಲ್ಲದಂತಾಯ್ತು ಕಣ್ಣಿಗೆ.*

*ನೋಗ ಮಾಡುತ ಹ್ಯಾಂಗಾರ ಬರತಿ*
*ತೂಕಡಿಕೆಯೊಳು ಹೆಜ್ಜೆಯನಿಡತಿ*
*ಆಕಳಿಕೆಯ ನೀ ಬಾಯೊಳು ತರತಿ*
*ಸಾಕು ಹೋಗು ನೀ ಇದೇ ಕಡೆಸರತಿ*

*ಹೀನಲೌಡಿ ಹಿಂದಕ ಸರಿ ಜ್ವಾಕಿ*
*ಜ್ಞಾನವೆಂಬ ಕಣ್ಣಿಗೆ ಮುಸುಕ್ಹಾಕಿ*
*ಮೌನದಿಂದ ನೀ ಶಿಶುನಾಳಾಧೀಶನ*
*ಧ್ಯಾನವ ಕೆಡಿಸುವುದಿದ್ಯಾವ ರೀತಿ ? (೧೯೫)*

ಹಾದರಗಿತ್ತಿ ಎಂಬ ಸಂಬೋಧನೆ ತಮಸ್ಸು ಮತ್ತು ನಶ್ವರ ಸುಖವನ್ನು ಸಂಕೇತಿಸುತ್ತದೆ. ಪ್ರಮಾಣ ಎಂಬ ಮನೋವೃತ್ತಿ–ಯಥಾರ್ಥಜ್ಞಾನಗಳ ವಶವಾಗಿರುವಾಗ,ಸುಷುಪ್ತಿಯ ಈ ಭಾವ ದೇಹದೊಳಡಗಿರುತ್ತದೆ. ವಿವೇಕಖ್ಯಾತಿಗೆ ಪ್ರತಿಬಂಧಕವಾದ ನಿದ್ರಾವಸ್ಥೆ ನಿರೋಧಿಸತಕ್ಕದ್ದೇ ಆಗಿದೆ. ಆದಕ್ಕಾಗಿ ಶರೀಫರು ಎಚ್ಚರಿಸುತ್ತಾರೆ – ಸಾಕು, ಹೋಗು ನೀ, ಇದೇ ಕಡೆಸರತಿ. ಮತ್ತೆ ಬರದಿರು ಎಂದು. ಏಕೆಂದರೆ ಅರಿವಿಗೆ ಅಡ್ಡಿ ತರುವುದಕ್ಕಿಂತ ಹೆಚ್ಚಾಗಿ ಸಾಧನೆಗೆಪ್ರಯತ್ನಕ್ಕೆ ದೊಡ್ಡ ವಿಘ್ನ – ನಿದ್ರೆ.

ಸಾಧಕನಿಗೆ, ಜಿಜ್ಞಾಸುವಿಗೆ ಎದುರಾಗುವ ಇನ್ನೊಂದು ತಡೆ–ಅವಿದ್ಯೆಯಿಂದ ಜನಿಸಿದ ಅಸ್ಮಿತೆ. ದರ್ಶಕನಾದ ಜೀವಾತ್ಮದರ್ಶನಸಾಧನಗಳಾದ ಇಂದ್ರಿಯಮನಸ್ಸುಗಳನ್ನು ತಾನೇ ಎಂದು ಭ್ರಮಿಸುತ್ತಾನೆ. ಆ ಕಾರಣದಿಂದ ಆಯಾ ಸಾಧನಕ್ಕೆ ದೊರೆತ ಸುಖವನ್ನು ತನ್ನದೇ ಸುಖವೆಂದು ಭಾವಿಸುತ್ತಾನೆ. ಆ ಸುಖವನ್ನು ಮತ್ತಷ್ಟು ಸಂಪಾದಿಸಲು ಹೊರಡುತ್ತಾನೆ. ಇದನ್ನೇ ಮಹಾಮೋಹ ಎನ್ನುತ್ತಾರೆ. ಈ ಮೋಹದ ಸ್ವರೂಪವನ್ನು ಸ್ಫುಟವಾಗಿ ಶರೀಫರು ವಿವರಿಸುತ್ತಾರೆ.

*ಗುರುಕರುಣಾಮೃತ ರಸ ರುಚಿಯೋಗರ*
*ಸುರಿದುಂಬದೆ ಸಿಗುವುದೇ ಮುಕುತಿ*

*ಬೇಗನೆ ತನುವಿನ ಭೋಗವ ನೀಗದೆ*
*ಯೋಗ ದೂರ ಎನುವುದ ಮರತಿ*

*ಮಂಗಗೆ ಮಾಣಿಕತೋರಲು ಗಿಡಗಳ*
*ಟೊಂಗಿಗೆ ಹಾರದೆ ಬಿಡುತಿಹುದೆ ?*

*ಅಂಗಜನಾಳಿಗೆ ಲಿಂಗವ ತೋರಲು*
*ಹೆಂಗಸರಾಸೆಯು ಹಿಂಗುವುದೆ? ॥*

*ಜರೆಮರಣಗಳೊಳು ಚರಿಸ್ಯಾಡುವವನಿಗೆ*
*ಗುರುಮಾರ್ಗವು ತಾದೊರಕುವುದೇ?*

*ಧರೆಯೊಳು ಶಿಶುನಾಳಾಧೀಶನ ಸ್ಮರಿಸದೆ*
*ಮರಳಿ ಮರಳಿ ಜನ್ಮ ತಪ್ಪುವುದೇ? (೨೨೯)*

ರಾಗ-ದ್ವೇಷ -ಅಭಿನಿವೇಶ ಎಂಬ ಮೂರು ಕ್ಲೇಶಗಳು ಹೀಗಿವೆ. ಸುಖಾನುಭವದ ಅನಂತರ, ಅದು ಮತ್ತೆ ಬೇಕೆಂದು ತೋರುವ ಆಸೆಯು ರಾಗ. ರಾಗಬದ್ಧವಾದ ಮನಸ್ಸು ಅಲೆಅಲೆಯಾಗಿ ಪ್ರವರ್ತಿಸುತ್ತದೆ. ಸ್ನೇಹ – ಅಧೋಗಾಮಿ, ಶ್ರದ್ಧೆ-ಊರ್ಧ್ವಗಾಮಿ, ಪ್ರೇಮ-ಸಮಗಾಮಿ- ಇವೆಲ್ಲ ರಾಗದ ಶಾಖೆಗಳು. ದು:ಖಾನುಭವದ ಸ್ಮರಣೆಯಿಂದ ಹುಟ್ಟುವ ವಿರೋಧಭಾವನೆಯು ದ್ವೇಷ. ಇದು ರಾಗಭಾವಕ್ಕೆ ವಿಪರೀತವಾದ್ದು. ಅನಿಚ್ಛಾವರ್ತನೆಯಿದು .

ಮೂರ್ಖನಲ್ಲ-ಪಂಡಿತನಲ್ಲಿ, ಜ್ಞಾನಿ-ಅಜ್ಞಾನಿಗಳಲ್ಲಿ, ನಿರಕ್ಷರಿಯಲ್ಲಿ-ವಿದ್ವಾಂಸರಲ್ಲಿ ಎಲ್ಲೆಡೆ ಸಮಾನವಾಗಿ ಕಾಣಿಸುವ ಸ್ವಹಿತಚಿಂತನೆಯೇ ಅಭಿನಿವೇಶ. ಸಾಯಬಾರದು, ಹೆಚ್ಚು ಬದುಕಬೇಕು ಎಂಬ ಯೋಚನೆ ಮೃತ್ಯುಭಯದಿಂದ ಉಂಟಾಗುತ್ತದೆ. ಈ ಕ್ಲೇಶಗಳನ್ನು ದೂರ ಮಾಡಲು ಧ್ಯಾನದಿಂದ ಸಾಧ್ಯ.

ಈ ಉಪದೇಶವನ್ನು ಶರೀಫರು ನೀಡಿದ್ದಾರೆ.

*ಬೆಳಗಾಗೋ ತನಕ ಕುಳಿತುನೋಡೋ, ನಿನ್ನ*
*ತಿಳುವಳಿಕೆ ಜ್ಞಾನವನು*
*ಬಲು ವಿಷಯದಿಂ ಬಳಲಿಸಿ ತನುತ್ರಯ-*
*ದೊಳಗೆ ಹೊರಗ ಸುಳಿದಾಡೊ ಮನವೇ (೯೭)*

ಬೆಳಗಾಗುವ ತನಕ, ಬೆಳಕುಮೂಡುವ ತನಕ, ಅರಿವಾಗುವವರೆಗೆ ಧ್ಯಾನ ನಡೆಸಬೇಕು ಎಂದಿದ್ದಾರೆ ಶರೀಫರು. ಲಕ್ಷ್ಯ ಸಾಧಿಸುವವರೆಗೆ, ಧ್ಯೇಯದೊಡನೆ ಏಕೀಭವಿಸುವ ತನಕ ಧ್ಯಾನ ಸಾಗಬೇಕು.

ಮಲ್ಲಾಡಿಹಳ್ಳಿಯ 'ತಿರುಕ – ರಾಘವೇಂದ್ರ ಸ್ವಾಮೀಜಿ ಒಂದೆಡೆ ಹೀಗೆ ಬರೆದಿದ್ದಾರೆ' " **ಅನುಭವಿಗಳ ಜೇನುಸೊಲ್ಲು ನಾಡಾಡಿಗಳಿಗೆ ಸಾಮಾನ್ಯವಾಗಿ ಕಂಡರೂ ಸರ್ವ ವೇದೋಪನಿಷತ್ತುಗಳ ಸಾರ ಅದರಲ್ಲಿ ಅಡಗಿದೆ."** ಈ ಮಾತಿಗೆ ಉತ್ತಮಮಾದರಿ ಎನಿಸುವ ಒಂದು ಗೀತೆ ಇದೆ. ಸಾಧನೆಯ ಪಥವನ್ನು ಹಂತಹಂತವಾಗಿ ವಿವರಿಸುತ್ತದೆ. ರಂಜನೀಯವೂ ಸ್ವಾರಸ್ಯಪೂರ್ಣವೂ ಆಗಿದೆ. ಹಾಡುವ, ಕೇಳುವ ಜನರಿಗೂ ಸಾಧನೆ ಮಾಡಲು ಪ್ರಚೋದನೆ ನೀಡುವಂತಿದೆ. ತತ್ತ್ವಜ್ಞಾನಿಗಳಿಗೆ ಜೀವನದಲ್ಲಿ ಎದುರಾಗುವ ಪ್ರತಿಯೊಂದು ಆಧ್ಯಾತ್ಮಿಕಸಂಕೇತವಾಗಿ ತೋರುತ್ತದೆ. ಮಹತ್ವದ ವಿಚಾರಗಳನ್ನು ತಿಳಿಯಪಡಿಸಲು, ಸರ್ವಜನಪರಿಚಿತವಾದ ವಸ್ತುಗಳನ್ನು ಉದಾಹರಣೆಯಾಗಿ ಸ್ವೀಕರಿಸುತ್ತಾರೆ. ಸುಲಭಗ್ರಾಹ್ಯವಾದ ಬಾಹ್ಯನೋಟದೊಂದಿಗೆ, ಒಳನೋಟ ಬೀರುವಂತೆ ಪ್ರೇರಿಸುತ್ತಾರೆ. ಭಂಗಿಯ ಹೊಗೆ ಸೇದಿ ಅಮಲಿನ ಅನುಭವ ಪಡೆವವರು ಸಾಮಾನ್ಯರು. ಚಿತ್ತದ ಪ್ರಚೋದನೆಗಾಗಿ, ಏಕಾಗ್ರತೆಗಾಗಿ ತಾಂತ್ರಿಕರು –ಯೋಗಿಗಳು ಸೇವಿಸುತ್ತಾರೆ. ಅಂತಹ ಗುಡುಗುಡಿಯ

ಸೇವನಾವಿಧಾನವನ್ನು ನಿರೂಪಿಸುತ್ತ, ಅದನ್ನೇ ಪ್ರತೀಕಾತ್ಮಕವಾಗಿ ಉಪಯೋಗಿಸಿ ಯೋಗ ಮಾರ್ಗವನ್ನು ಶರೀಫರು ಪ್ರದರ್ಶಿಸುತ್ತಾರೆ.

*ಗುಡುಗುಡಿಯ ಸೇದಿನೋಡೋ*
*ಒಡಲೊಳಗಿನ ರೋಗ ತೆಗೆದು ಈಡ್ಯಾಡೋ ।*

*ಮನಸೆಂಬ ಸಂಚಿಯ ಬಿಚ್ಚಿ ದಿನ*
*ದಿನವು ಮೋಹ ಅಂಬೋಭಂಗಿಯ ಕೊಚ್ಚಿ*
*ನೆನವೆಂಬ ಚಿಲುಮೆಯ ಹಚ್ಚಿ ! ಬುದ್ಧಿ*
*ಎನುವಂಥ ಕೆಂಡವ ಮೇಲೆ ನೀ ಮುಚ್ಚಿ ॥*

*ಬುರುಡಿಯೆಂಬುದು ಶರೀರ– ಇದ*
*ಅರಿತು ಸುಕೃತಕಿಟ್ಟು ಕೊಳವಿಯಾಕಾಣ*
*ಪರಶಿಶುನಾಳನೆಂಬೊ ನೀರಾ– ತುಂಬಿ*
*ಅರಿವೆಂಬ ಅರಿವಿಯ ಹೊಚ್ಚೊಮೋಜುಗಾರ ॥*

*ಶುದ್ಧ ಜ್ಞಾನ ಮೇಲೇರಿ, ದಾ–*
*ರಿದ್ರ್ಯ ದೇಹಸುಟ್ಟು ಹೊಗೆ ಹಾರುವುದು*
*ಬುದ್ಧಿವಂತರಾ ಎಳೆದು ವರ*
*ಸಿದ್ಧ ಶಿಶುನಾಳಾಧೀಶನ ತೋರ್‍ವದು ॥ (೨೦೧)*

***

**ಟಿಪ್ಪಣಿ**

೧. ಭಗವದ್ಗೀತೆ ಕರ್ಮಯೋಗ – ಶ್ಲೋಕ – ೩೮

೨. ಭಾರತೀಯ ಆಧ್ಯಾತ್ಮಿಕ ಪರಂಪರೆ – ಪುಟ ೨೯೪

೩. ಪತಂಜಲ ಯೋಗ ಸೂತ್ರ – ೧–೧೨

೪. „ ೧–೧೪ರ ವ್ಯಾಸ ಕೃತ ಭಾಷ್ಯ

೫. „ ೧–೧೫ರ ವ್ಯಾಸ ಕೃತ ಭಾಷ್ಯ

೬. „ ೨–೩ರ ವ್ಯಾಸ ಕೃತ ಭಾಷ್ಯ

೭. ಭಗವದ್ಗೀತೆ – ಅಧ್ಯಾತ್ಮಯೋಗ – ಶ್ಲೋಕ –೨೩

೮. ಕರ್ನಾಟಕ ಸೂಫಿಗಳು : ಅಧ್ಯಾಯ ೧೦ – ಪಂಥಗಳ ಗುರುತು

ಅಧ್ಯಾಯ ೧೨ – ಮತೀಯ ವಿಜಯ

೯. ವಿವೇಕ ಚೂಡಾಮಣಿ – ಶ್ಲೋಕ –೩೩

೧೦. ಪತಂಜಲ ಯೋಗ ಸೂತ್ರ – ೧–೧೦ ಸುಖದ, ದು:ಖದ, ಆಯಾಸದ ಅನುಭವಗಳು ನಿದ್ದೆಯಲ್ಲಿಯೂ ಇರುವ ಕಾರಣ ನಿದ್ದೆಯನ್ನು ಮನೋವೃತ್ತಿ ಎಂದು ಪರಿಗಣಿಸಲಾಗಿದೆ.

೧೧. ಬೃಹದ್ಯೋಗದರ್ಶನ –ತಿರುಕ – ಪುಟ ೨೮

# ಅಧ್ಯಾಯ ೬

೬.೧ ಕುಂಡಲಿನೀಯೋಗ ನಿರೂಪಣೆ.

೬.೨ ಯೋಗಪ್ರತಿಪಾದಕಉಪನಿಷತ್ತುಗಳು ಮತ್ತು ಶರೀಫರ ಪದಗಳು, ತುಲನಾತ್ಮಕವಿವೇಚನೆ.

೬.೩ ನಾದಯೋಗ.

# ಅಧ್ಯಾಯ – ೬

## ೬.೧ ಯೋಗೋಪನಿಷತ್ತುಗಳು ಮತ್ತು ಶರೀಫರ ಪದಗಳು. ತುಲನಾತ್ಮಕ ವಿವೇಚನೆ.

*ಸಾಧುಗಳಿಗಿದೇ ಸ್ಥಾನವೋ*
*ಸಾಧುಗಳಿಗಿದೇ ಧ್ಯಾನವೋ।*
*ಪದುಮದಳದ ಮದವು ಬೆಳೆದು*
*ಸದಮಲಾತ್ಮಯೋಗ ತುದಿಯ*
*ಮುದದಿ ಏರಿ ಮೆರೆದು ಬೆರೆತು*
*ಕದಲದಂತೆ ಕರುಣರಸದ (೮೧)*

ಇಡಿಯ ಯೋಗಸಾಧನಪ್ರಕ್ರಿಯೆಯನ್ನು ಅತ್ಯಂತ ಸಂಕ್ಷಿಪ್ತವಾಗಿ ಹೇಳಿರುವುದರಿಂದ ಈ ನುಡಿಗಳ ಅರ್ಥ ಅಸ್ಪಷ್ಟವಾಗಿದೆ. ಯೋಗೋಪನಿಷತ್ತಿನ[೧] ವಿವರಣೆಯನ್ನು ಗಮನಿಸಿದಾಗ ಶರೀಫರ ಮಾತು ತಿಳಿಯುವುದು. ಶುದ್ಧವಾದ ಚೇತಸ್ಸಿನಲ್ಲಿ ಸ್ವಾತ್ಮ ಜ್ಞಾನವು ಪ್ರಕಾಶಿಸುತ್ತದೆ. ಅದಕ್ಕಾಗಿ ಮೊದಲು ಯೋಗಾಭ್ಯಾಸ–ಮುಮುಕ್ಷುವಾದವನ ಮೊದಲ ಕಾರ್ಯವೆಂದರೆ ಪ್ರಾಣಜಯ. ಅಪಾನ–ಪ್ರಾಣಗಳ, ರಜಸ್ಸು– ರೇತಸ್ಸುಗಳ, ಸೂರ್ಯ–ಚಂದ್ರರ ಹಾಗೂ ಜೀವ–ಪರಮಾತ್ಮರೆಂಬ ದ್ವಂದ್ವ ಜಾಲದ ಸಂಯೋಗವೇ ಯೋಗ. ಬಹಿರ್ಮುಖವಾದ ಮನಸ್ಸನ್ನು ಸಂಗ್ರಹಿಸಿ, ನಾಸಿಕಾಗ್ರದಲ್ಲಿ ದೃಷ್ಟಿಯನ್ನು ನೆಲೆನಿಲ್ಲಿಸಿ, ಕೈಕಾಲುಗಳನ್ನು ಸ್ಥಿರವಾಗಿಟ್ಟುಕೊಂಡು ಪದ್ಮಾಸನದಲ್ಲಿ ಕುಳಿತು, ಓಂಕಾರವನ್ನು ಧ್ಯಾನಿಸಬೇಕು. ಹೃದಯದಲ್ಲಿ ಪರಮೇಷ್ಠಿಯನ್ನು ಚಿಂತಿಸಬೇಕು. ಏಕಸ್ತಂಭದ, ತ್ರಿಸ್ಥೂಣದ, ಪಂಚದೈವತವಾದ, ನವದ್ವಾರಗಳ ಶರೀರದಲ್ಲಿ ಆದಿತ್ಯಮಂಡಲಾಕಾರದ ನಡುವೆ, ಕಿರಣ ಜ್ವಾಲೆಯಿಂದ ಕೂಡಿದ, ದೀಪದ ಕುಡಿಯಂತಿರುವ ಅಗ್ನಿಯನ್ನು ಬೆಳಗಿಸಬೇಕು. ದೀಪದ ತುದಿಯಷ್ಟೆ ಪರಮೇಷ್ಠಿಯ ಪ್ರಮಾಣ. ಯೋಗಿಗಳಿಗೆ ಮಾತ್ರ ಅವನ ದರ್ಶನವಾಗುವುದು.

ಒಂದೇ ಆದ ಮಹಾಯೋಗವು ನಾಲ್ಕು ಪ್ರಕಾರವಾಗಿ ಹೇಳಲ್ಪಟ್ಟಿದೆ. ಮಂತ್ರಯೋಗ, ಲಯ ಯೋಗ, ಹಠ ಯೋಗ ಮತ್ತು ರಾಜ ಯೋಗ ಪ್ರತಿ ಮನುಷ್ಯನ ಸಹಜ ಉಸಿರಾಟದಲ್ಲಿ 'ಹಂಸ' ಮಂತ್ರದ ಉಚ್ಚಾರಣೆ ಇದೆ. ಗುರೂಪದೇಶದಂತೆ ಸುಷುಮ್ನಾ ನಾಡಿಯಲ್ಲಿ ಸೋಹಂ' ಎಂದು ವಿಪರೀತವಾಗಿ ಜಪಿಸಿದಾಗ ಮಂತ್ರಯೋಗ ಎನಿಸುತ್ತದೆ. 'ಹ' ಎಂದರೆ ಸೂರ್ಯ, 'ಸ' ಎಂದರೆ ಚಂದ್ರ. ಇವರಿಬ್ಬರ ಐಕ್ಯವೇ ಹಠಯೋಗ. ಆಗ ಚಿತ್ತವು ಲಯವಾಗುತ್ತದೆ. ವಾಯು ಸ್ಥಿರವಾಗುತ್ತದೆ. ಇದು ಲಯಯೋಗ. ಪ್ರತಿ ಜೀವಿಯಲ್ಲಿರುವ ರಜಸ್ಸು, ದೇವೀತತ್ತ್ವ. ಅದು ಮತ್ತು ರೇತಸ್ಸು ಒಂದಾಗುವುದು ರಾಜಯೋಗ.

ಲಯಯೋಗದ ಕೊನೆಯಲ್ಲಿ ಪರಮಸೌಖ್ಯದ, ಸ್ವಾತ್ಮಾನಂದದ ಪರಪದದ ಲಾಭ. ಇದನ್ನು ತಿಳಿಸುವ ಶರೀಫರ ಅನುಭಾವದ ನುಡಿ ಇಂತಿದೆ –

*ಚಂದ್ರ ಸೂರ್ಯರೊಂದು ಗೂಡಿದಾ, ಅಲ್ಲೇ*
*ನಿಂದಲ್ಲೇ ನಿಂದು ಅಂದವಾದ ಬೆಳಕು ಮೂಡಿದ*
*ರಂಧ್ರದೊಳಗೆ ಹೊಳೆವ ಮಿಂಚ*
*ನೊಂದೇ ದೃಷ್ಟಿಯಿಂದ ನೋಡಿ*
*ಸಂದು ಸೂಚನಾರ್ಥ ತಿಳಿದು ಬಿಂದು ವಸ್ತು ಸವಿದು ಸುಖದ (೮೧)*

ಯೋಗಸಾಧನೆಯ ಫಲವನ್ನು ಉಪನಿಷತ್ತು – ಮೊದಲು ರೋಗಪ್ರಕಾಶ, ಆಮೇಲೆ ಶರೀರದ ಜಾಡ್ಯ ನಿವೃತ್ತಿ. ಕೊನೆಗೆ ಸಮರಸತೆಯೊಂದಿಗೆ **"ಚಂದ್ರೋ ವರ್ತತಿ ಅನಾರತಂ"** ಅಂದರೆ ನಿರಂತರವಾದ ಅಮೃತ ಅರ್ಥಾತ್ ಸ್ವಾತ್ಮಸುಖದ ಆನಂದ, ಎಂದು ವಿವರಿಸಿದೆ. ಶರೀಫರ ಮಾತು ಹೀಗೆ –

*ಭೂತ ಪಂಚಕವಳಿದು ತೋರುವ ಸಂ–*
*ಪ್ರೀತಿಯಿಂದ ಮಾತು ಮಾತಿಗೆ ಮೋಜು ಕಾಣುವ*
*ಧಾತ ಪರಬ್ರಹ್ಮನ ಮೂರ್ತಿ*
*ಈತನೆಂದು ಅರಿತು ಪವನ*
*ಜಾತದೊಳಗ ಜನ್ಮರೀತಿ ಕೌತುಕದಿ ಕಳಿತು ಮೆರೆವ*

*ತಾಗು ಬಾಗನೆಲ್ಲ ಕಳೆದು ಅಲ್ಲಿಳಿದನು*
*ಯೋಗ ಸಾಧನವನ್ನು ಮಾಡಿ*
*ಭೋಗ ವಿಷಯ ಕೂಗಿ ದೂಡಿ*
*ರಾಗದಿಂದ ರಜದ ಕೊನೆಯ ಮೇಲೆ ನಿಂತು ಚಂದ್ರ ಜ್ಯೋತಿ. (೮೧)*

ಪಂಚಮಹಾಭೂತಗಳಿಂದ ಸಿದ್ಧವಾದ ಶರೀರದೊಳಗೆ ತೋರುವ ಪರಬ್ರಹ್ಮನ ಮೂರ್ತಿಯನ್ನು ಅರಿಯಲು ಪ್ರಾಣಾಯಾಮಾದಿ ಸಾಧನೆಗಳನ್ನು ನಡೆಸಿ, ಶರೀರ–ಮನಗಳ ತಾಗ–ಬಾಗುಗಳನ್ನು ನಿವಾರಿಸಿಕೊಳ್ಳುವುದು. ಕರೆಕರೆದು ಭೋಗವಿಷಯಗಳನ್ನು ನಿರಾಕರಿಸಿ ರಾಗಸ್ಥಿತಿಯಿಂದ ರಜೋಗುಣದವರೆಗೆ ಎಲ್ಲವೂ ಕೊನೆಯಾಗುವ ಹಂತ ದಾಟಿದ ಮೇಲೆ ದರ್ಶನವಾಗುವುದು ಚಂದ್ರಕಿರಣದಂತೆ ತಂಪಾದ ಆತ್ಮಜ್ಯೋತಿ. ಆ ದರ್ಶನದ ಲಕ್ಷಣ–ಪರಿಣಾಮಗಳನ್ನು ಶರೀಫರು ಹೇಳಿದ ಬಗೆ ಹೀಗೆ –

*ಚಾಗು ಸದಾನಂದ ಜಲದೊಳು ಬೋಧ*
*ಆಗಲತೆಯನೇಕ ಮಂತ್ರಮೂಲಕಲೆಗಳ*
*ಏಕನಾಥ ಶಿಶುನಾಳಾಧೀಶನಲ್ಲಿ ತಾಕಿತಾಕಿ*
*ಜೋಕಿಯಿಂದ ಜನನ ಮರಣ ನೂಕಿ ನಿಜದಿ ನಿಲುವಂಥ – ।*
*ಸಾಧುಗಳಿಗಿದೇ ಸ್ಥಾನವೋ । (೮೧)*

ಬೋಧಪ್ರಾಪ್ತಿಯಾಯಿತೆಂದರೆ ಸದಾ ಆನಂದಮಯಜಲದಲ್ಲಿ ಮಿಂದಂತೆ. ಎಲ್ಲ ಮಂತ್ರಗಳ ಗಮ್ಯವಾದ, ಕಲಾಪೂರ್ಣನಾದ ಏಕೈಕಪ್ರಭುವಾದ ಪರಮಾತ್ಮನಲ್ಲಿ ಏಕತೆ ಹೊಂದುವುದು. ಆಮೇಲೆ ಜನನಮರಣದ್ವಂದ್ವವಿಲ್ಲ. ಇದೇ ಸಾಧುಗಳ ಸ್ಥಾನ – ನೆಲೆ.

ಉಪನಿಷನ್ಮೂಲವಾದ ಹಾಗೂ ಯೋಗಶಾಸ್ತ್ರಪರಂಪರೆಯ ಸಾರಭೂತವಾದ ತಾತ್ತ್ವಿಕ ಪರಿಣತಿ ಮತ್ತು ಪ್ರತ್ಯಕ್ಷಾನುಭವಗಳು ಗುರೂಪದೇಶದಿಂದಲೂ ಸಾಧನೆಯಿಂದಲೂ ಶರೀಫರಿಗೆ ಅಧೀನವಾಗಿದ್ದಂತೆ ತೋರುತ್ತದೆ.

ಯೋಗಚೂಡಾಮಣಿ, ಯೋಗ ತತ್ತ್ವ, ಯೋಗರಾಜ ಮುಂತಾದ ಉಪನಿಷತ್ತುಗಳಲ್ಲಿ, ಹಠ ಯೋಗ ಪ್ರದೀಪಿಕಾ, ಘೇರಂಡ ಸಂಹಿತಾ ಇತ್ಯಾದಿ ಯೋಗಶಾಸ್ತ್ರೀಯಗ್ರಂಥಗಳಲ್ಲಿ ಮತ್ತು ತಂತ್ರ ಸಂಗ್ರಹಗಳಲ್ಲಿ ಪ್ರಾಯೋಗಿಕವಾದ ವಿವರಣಗಳಿವೆ. ಆಸನಬಂಧ, ಪ್ರಾಣಾಯಾಮ, ಬೆನ್ನ ಹುರಿಯ ಬುಡವಾದ ಮೂಲಾಧಾರದಿಂದ ತೊಡಗಿ ಹುಬ್ಬುಗಳ ನಡುವಿನ ಆಜ್ಞಾಚಕ್ರದವರೆಗೆ ಷಟ್ ಚಕ್ರಗಳು, ಶರೀರಸ್ಥಿತವಾದ ವಾಯುವಿನ ಪ್ರಾಣಾದಿ ದಶಸಂಜ್ಞೆಗಳು, ಅವುಗಳ ಲಕ್ಷಣ, ಕಾರ್ಯವಿಧಾನ, ನಿಯಂತ್ರಣದ ಕ್ರಮ, ಪರಿಣಾಮ ಇವನ್ನೆಲ್ಲಾ ಸವಿಸ್ತಾರವಾಗಿ ಹೇಳಿದೆ.

*ಯೋಗಿ ಕುಳಿತುಕೊಳ್ಳಬೇಕಾದ ಕ್ರಮ–*
***ಪದ್ಮಾಸನಂ ಸ್ವಸ್ತಿಕಾಖ್ಯಂ ವಜ್ರಂ ಭದ್ರಾಸನಂ ತಥಾ।***
***ವೀರಾಸನಮಿತಿ ಪ್ರೋಕ್ತಂ ಕ್ರಮಾದಾಸನ ಪಂಚಕಂ ॥ (ಶಾರದಾತಿಲಕ ತಂತ್ರ)***

**ವಾಯುವಿನ ಶ್ವಾಸ – ಪ್ರಶ್ವಾಸಗಳ ಕ್ರಮ:**

**ಇಡಾ ವಾಮೇ ಸ್ಥಿತಾ ನಾಡೀ ಪಿಂಗಲಾ ದಕ್ಷಿಣಾ ಮತಾ। (ಶಾರದಾತಿಲಕ ತಂತ್ರ)**
**ತಯೋಃ ಮಧ್ಯಗತಾ ನಾಡೀ ಸುಷುಮ್ನಾ ಉರಮಾಶ್ರಿತಾ ॥** ಶಿವ ಶಕ್ತಿರೂಪವಾದ ಶರೀರದೊಳಗೆ ಪ್ರಾಣವಾಯುವಿನ ಸಂಚಾರಕ್ಕಾಗಿ ಎಡ–ಬಲಭಾಗಗಳಲ್ಲಿ ಇರುವ ನಾಡಿಗಳಿಗೆ ಇಡಾ–ಪಿಂಗಲಾ ಎಂಬ ಹೆಸರು. ಮಧ್ಯನಾಡಿ – ಸುಷುಮ್ನಾ.

**ಇಡಾಯಾಂ ಸಂಚರೇಚ್ಚಂದ್ರಃ ಪಿಂಗಲಾಯಾಂ ದಿವಾಕರಃ ।** ಈ ನಾಡಿಗಳಲ್ಲಿ ಅನುಕ್ರಮವಾಗಿ ಚಂದ್ರ– ಸೂರ್ಯ ಸಂಚರಿಸುತ್ತಾರೆ. ಸುಷುಮ್ನಾನಾಡಿಯಲ್ಲಿ ಇಬ್ಬರೂ ಒಂದಾಗಿ ನಡೆಯುತ್ತಾರೆ. ಶರೀಫರ 'ಚಂದ್ರಸೂರ್ಯರೊಂದುಗೂಡಿದಾ' ಎಂಬ ನುಡಿಯನ್ನು ಇಲ್ಲಿ ನೆನೆಯಬಹುದು.

ಬೆನ್ನಹುರಿಯ ಮೂಲದಿಂದ, ಮೆದುಳಿನ ನಡುಭಾಗದವರೆಗೆ ನರಮಂಡಲದ ಪ್ರಜ್ಞಾಕೇಂದ್ರ ಸ್ಥಾನ. ಚೈತನ್ಯದ ಮಹಾಶಕ್ತಿ ಸಂಚಾರವಾಗುವ ಸ್ಥಳ. ಇದನ್ನು ವೀಣಾದಂಡ , ಮೇರುದಂಡ ಇತ್ಯಾದಿಯಾಗಿ ಕರೆದಿದ್ದಾರೆ. ಮೂಲದಲ್ಲಿರುವ ಆಧಾರಚಕ್ರದಲ್ಲಿ ಬೆಳಕಿನ ಮನೆಯಂತೆ, ಮಿಂಚಿನ ಬಳ್ಳಿಯಂತೆ, ಸುರುಳಿಸುತ್ತಿಮಲಗಿರುವ ಸರ್ಪದಂತೆ, ಸುಪ್ತವಾಗಿರುವ ಶಕ್ತಿಯನ್ನು 'ಕುಂಡಲಿನಿ' ಎಂದು ಹೇಳಲಾಗಿದೆ. ಇಲ್ಲಿಂದಲೇ ಪ್ರಾಣಶಕ್ತಿ ನಾಡಿಗಳ ಮೂಲಕ ಶರೀರಾದ್ಯಂತ ವ್ಯಾಪಿಸಿಕೊಳ್ಳುತ್ತದೆ.

ಪ್ರಾಣಗಳು ದಶವಿಧ. ಅಂದರೆ ದೇಹದ ಚಟುವಟಿಕೆಗಳಲ್ಲಿ ಸಹಕರಿಸುವ ಪ್ರಾಣವನ್ನು ಉಪಯೋಗಕ್ಕೆ ತಕ್ಕಂತೆ ಪ್ರತ್ಯೇಕವಾಗಿ ಕಂಡು ಹೆಸರಿಸಲಾಗಿದೆ. ಬಾಯಿ, ಮೂಗು, ಹೃದಯ ನಾಭಿಗಳಲ್ಲಿ ಪ್ರಾಣ, ವಿಸರ್ಜನೆಯಲ್ಲಿ ಅಪಾನ. ಜೀರ್ಣಕ್ರಿಯೆಯಲ್ಲಿ ವ್ಯಾನ– ಮರ್ಮಸ್ಥಾನಗಳಲ್ಲಿ

ಉದಾನ, ತಿನ್ನುವ, ಕುಡಿವ, ಮೂಸುವ, ಹಾಗೂ ರಕ್ತ, ಪಿತ್ತ, ಕಫ ವಾತಗಳನ್ನು ಸಮತೋಲದಲ್ಲಿ ಇಡುವಲ್ಲಿ ಸಮಾನವಾಯುವು ಕಾರ್ಯಗೈಯುತ್ತದೆ. ಉದ್ಗರಿಸುವಲ್ಲಿ ನಾಗ, ಕಣ್ಣರೆಪ್ಪೆ ಮುಚ್ಚಿ ತೆರೆವಲ್ಲಿ ಕೂರ್ಮ, ಕೆಮ್ಮು- ಸೀನುಗಳಲ್ಲಿ ಕೃಕರ, ಆಕಳಿಸುವಲ್ಲಿ ದೇವದತ್ತ, ಘೋಷಿಸುವಲ್ಲಿ ಧನಂಜಯ ಎಂಬ ವಾಯುಗಳು ಕೆಲಸ ಮಾಡುತ್ತವೆ.[8] ಇವೆಲ್ಲ ಶಾಸ್ತ್ರಸೂಕ್ಷ್ಮಗಳನ್ನು ಸಂಕ್ಷಿಪ್ತವಾಗಿ ತಿಳಿಸುತ್ತಾರೆ ಶರೀಫರು. **'ಪಿರಿದರ್ಥಮಂ ಕಿರಿದಾಗಿ'** ಹೇಳುವ ಯತ್ನದಲ್ಲಿ ಕೆಲವೊಮ್ಮೆ ಸಂದಿಗ್ಧತೆ ತಲೆತೋರುತ್ತದೆ. ವಚನವು ಬೆಡಗಾಗಿ ಬೆರಗು ಹುಟ್ಟಿಸುತ್ತದೆ.

ಈ ಗೀತೆ ನೂಲುವ ಹೆಣ್ಣಿನ ಕುರಿತಾದುದು. ಇದರಲ್ಲಿ ಬೆಡಗೂ ಇದೆ, ಸರಲತೆಯೂ ಇದೆ. ರೂಪಕಾತ್ಮಕ ವಿವರಣೆಯೂ ಇದೆ.

*ಆರಗೊಡವಿನ್ನೇನು ಮಗಳೆ*
*ಮುನ್ನೋಡಿ ಹಂಜಿ ನೂಲಮ್ಮ!*
*ದಾರಿಕಾರರು ನಿನ್ನಾ ಮಾರಿನೋಡಲು*
*ಮಾರಿಯೆತ್ತಿ ನೋಡಬೇಡಮ್ಮಾ॥(೧೭೦)*

ಹತ್ತಿಯನ್ನು ಹಿಂಜಿ ನೂಲಲು ಕುಳಿತ ಹೆಣ್ಣು ಮಗಳು ಒಂದೇ ಮನದಿಂದ ನೂಲಬೇಕು. ಬೀದಿಯಲ್ಲಿ ತಿರುಗುವವರ ನೋಡುತ್ತಾ ಕುಳಿತರೆ ನೂಲು ತಯಾರಾದೀತೆ? ಅವರಿವರ ಗೊಡವೆಗಿಳಿದರೆ ನಮ್ಮ ಕೆಲಸ ಪೂರೈಸೀತೇ ?

ಸಾಧಕನಾದವ ನಿಷ್ಠೆಯಿಂದ ತನ್ನ ಲಕ್ಷ್ಯ ಸಾಧಿಸುವ ಯತ್ನದಲ್ಲಿರಬೇಕೇ ಹೊರತು ಲೋಕವ್ಯವಹಾರಕ್ಕಿಳಿದರೆ, ಕೆಲಸ ಕೆಡುತ್ತದೆ. ಹೊಗಳುವ ಮತ್ತು ತೆಗಳುವ ಎರಡು ವಿಧದ ಜನರೂ ಸಾಧಕನಿಗೆ ಅಂತರಾಯ (ವಿಘ್ನ )ಗಳೇ. ಆದ್ದರಿಂದ ಮಾರಿ ಎತ್ತಿ ನೋಡಬಾರದು.
ಪದತಿರುಗಿದ ಪರಿಯ ನೋಡಿ –

*ಆಸನ ದೊಡ್ಡಾ ಮಣೆಗಳ ಮಾಡಿ*
*ಆ ಶಶಿ ರವಿಗಳ ಕುಂಭಗಳ್ಹೂಡಿ*
*ಸೂಸುವ ಚಕ್ರದ ಎಲೆಗಳ ಮೇಲೆ*
*ದಶವಾಯುಗಳೆಂಬ ನುಲಿಗಳ ಬಿಗಿದು ॥*

*ಹರಿಯನ್ನು ಬ್ರಹ್ಮನಾಳ ಮಾಡಿ*
*ಕುರುಹು ನಾಶಕ ಬೆನಕವ ಹೂಡಿ*
*ಪರಶಿವನೆಂಬ ದಾರವ ಕಟ್ಟಿ*
*ವೈರಾಗ್ಯವೆಂಬುವ ಬಿಲ್ಲುಗಳನಿಟ್ಟು॥*

*ಜ್ಞಾನವೆಂಬ ಕದರನಿಟ್ಟು*
*ಮಾನವ ಧರ್ಮದ ಹಂಜಿಯ ಬಡಿದು*
*ಅನುಭವವೆಂಬುವ ಎಳೆಗಳ ತೆಗೆದು*
*ಅನುವಿಲೆ ಸುಮ್ಮನೇ ನೂಲಮ್ಮ ॥*

*ಕಕುಲಾತಿ ಎಂಬುದ ಕಸರನು ಕಳೆದು*
*ಸುಖದುಖೆಂಬ ಸಿರದೊಡಕಳಿದು*
*ಭಕುತಿ ಎಂಬುವ ಕೋಳವಿಯನ್ನಿಡಿದು*
*ಹುಕ್ಕಡಿನೆಲ್ಲಾ ನೂಲಮ್ಮ॥ (೭೦)*

ಉಚ್ಛ್ವಾಸ- ನಿಶ್ವಾಸಗಳಲ್ಲಿ 'ಹಂಸ' ಎಂಬ ಸಹಜಮಂತ್ರ ಅಡಗಿದೆ. ಜೀವನು ದಿನವೊಂದಕ್ಕೆ ೨೧೬೦೦ ಬಾರಿ ಉಸಿರಾಡುತ್ತಾನೆ. ಇದು ಬುದ್ಧಿಪೂರ್ವಕವಾಗಿ ಅಥವಾ ಪ್ರಯತ್ನಿಸಿ ಮಾಡುವ ಕಾರ್ಯವಲ್ಲ. ದೇಹದ ಅನೈಚ್ಛಿಕಕ್ರಿಯೆಗಳಲ್ಲಿ ಇದೂ ಒಂದು. ಆದರೆ ಒಣ ಕಟ್ಟಿಗೆಯಲ್ಲಿ ಬೆಂಕಿ ಅಡಗಿರುವಂತೆ, ಎಳ್ಳಲ್ಲಿ ಎಣ್ಣೆ ಇರುವಂತೆ, ಈ ಹಂಸಮಂತ್ರವು ನಿತ್ಯೋಚ್ಚಾರಣವಾಗುತ್ತಲೇ ಇರುತ್ತದೆ. ಹಾಗಾಗಿ ದೇಹದೊಳಗಿನ ಜೀವದ ನಿತ್ಯ-ಸಹಜ ಧರ್ಮವನ್ನು ತಿಳಿದು ಕ್ರಮವಾಗಿ ಜಪಧ್ಯಾನಗಳನ್ನು ನಡೆಸಬೇಕು. ಶರೀಫರೆಂದಂತೆ –

*ಇಪ್ಪತ್ತೊಂದು ಸಾವಿರದಾ*
*ಮೇಲಾರನೂರಾ ಎಳಿಗಳ ಹೊಯ್ದು*
*ತಪ್ಪದೆ ಎಣಿಕಿಯ ಮಾಡಿ ನೀನು*
*ಒಪ್ಪಿಸಿ ಪಟ್ಟೇವ ಸುತ್ತವ್ವಾ ॥*

ಶಾಸ್ತ್ರಗಳಲ್ಲಿ **ಅಜಪಾಗಾಯತ್ರೀ** ಎನ್ನುವ ಈ 'ಹಂಸ' ಮಂತ್ರದ ಗುರಿ ಹೀಗೆ–

*ಪ್ರತ್ಯಕ್ಷ ಪರಮಾತ್ಮನೆಂಬುವ*
*ಉತ್ತಮವಾದ ಹೋಳಾನೆಯ್ದು*
*ಕೃತ್ತಿವಾಸ ಶಿಶುನಾಳಧೀಶನಿಗೆ*
*ಮುಟ್ಟಿಸಿ ಮುಕ್ತಿ ಪಡೆಯವ್ವಾ । ।(೧೭೦)*

**೬.೨ ಕುಂಡಲಿನೀ ಯೋಗ:**

ಮಲ್ಲಾಡಿಹಳ್ಳಿಯ ಯೋಗಿ, ವೈದ್ಯ ರಾಘವೇಂದ್ರ ಸ್ವಾಮಿಗಳು ಅಜ್ಞಾತ ಜಾನಪದ ಕವಿಯೊಬ್ಬನ ನುಡಿಯನ್ನು ಉಲ್ಲೇಖಿಸಿ ಕುಂಡಲಿನೀ ಯೋಗವನ್ನು ಪರಿಚಯಿಸುತ್ತಾರೆ.[*]

*ಕಟ್ಟಿದನೊಂದು ಗುಡಿಯ ಶಿವಾ*
*ತಾ ಗುಟ್ಟಾಗಿ ನಿಂತನು ಒಳಗೆ ಅವಾ ।*
*ಪಟ್ಟದ ರಾಣಿಯ ನೆಲಮನೇಲಿಟ್ಟು*
*ಅಟ್ಟವ ಸೇರಿ ಕುಳಿತನವ ॥*

ಒಗಟಿನಂತಿರುವ ಈ ನುಡಿಯ ತಾತ್ಪರ್ಯ ಹೀಗೆ–ದೇಹವೇ ದೇವಾಲಯ. ಜೀವನೇ ಶಿವ. ನೆತ್ತಿಯಲ್ಲಿ ಅವನ ವಾಸ. ಬೆನ್ನ ಬುಡದಲ್ಲಿ ಶಕ್ತಿಯ ನೆಲೆ. ದೂರವಾಗಿರುವ ಈ ದಂಪತಿಗಳನ್ನು ಅಂದರೆ ಶಿವ – ಶಕ್ತಿಯರನ್ನು ಒಂದಾಗಿಸಬೇಕು. ಹಾಗೆ ಅವರು ಸಮಾಗಮ ಹೊಂದಿದಾಗ ಅಪರಿಮಿತ ಆನಂದ ದೊರೆಯುತ್ತದೆ. ಈ ಚುಟುಕ ಯೋಗಕುಂಡಲೀ ಉಪನಿಷತ್ತಿನ ಸಂಕ್ಷಿಪ್ತ ಅನುವಾದದಂತಿದೆ.

ಚಿತ್ತದ ಸ್ಥಿತಿಯ ಕಾರಣಗಳೆರಡು. ಒಂದು ಪೂರ್ವದ ವಾಸನೆ. ಎರಡನೆಯದು ವಾಯು/ಉಸಿರು. ಮೊದಲಿಗೆ ಉಸಿರನ್ನು ಗೆಲ್ಲಬೇಕು. ಆಮೇಲೆ ಮಿತಾಹಾರ, ಸೇವನೆ, ಅಭ್ಯಾಸ ಆಸನ ಹಾಗೂ ಶಕ್ತಿ ಚಾಲನದ ಪ್ರಯತ್ನ. ಇಡಾ– ಪಿಂಗಲನಾಡಿಗಳನ್ನು ಪೂರಕ–ಕುಂಭಕಗಳಿಂದ ತುಂಬಿಸಿ, ಸುಷುಮ್ನಾನಾಡಿಗೆ ಉಸಿರನ್ನು ಒಯ್ಯಬೇಕು. ಅದರ ಮೂಲಕ ಮೂಲಾಧಾರದಲ್ಲಿರುವ (ಬೆನ್ನ ಹುರಿಯ ಮೂಲ) ಸುಪ್ತವಾಗಿರುವ, ಸುರುಳಿ ಸುತ್ತಿರುವ, ತನ್ನ ಬಾಲವನ್ನೇ ಬಾಯಲ್ಲಿ ಹಿಡಿದಿರುವ ಕುಂಡಲಿನಿಯನ್ನು ಆಕರ್ಷಿಸಬೇಕು. ಸುಷುಮ್ನಾನಾಡಿಯನ್ನು ಪ್ರವೇಶಿಸುವಂತೆ ಮಾಡಿ ಭ್ರೂಮಧ್ಯದ ಅಜ್ಞಾಚಕ್ರದವರೆಗೆ ತರುವುದೇ ಶಕ್ತಿಚಾಲನ. ಸುರುಳಿಸುತ್ತಿರುವ ಕುಂಡಲಿನಿ ಪ್ರಾಣದ ರೋಧದಿಂದ ನೇರವಾಗುತ್ತದೆ. ಪದ್ಮಾಸನದಲ್ಲಿ ಕುಳಿತು ಪ್ರಾಣಾಯಾಮದ ಕುಂಭಕ ಸ್ಥಿತಿಯಿಂದ ಪೂರ್ಣವಾಗಿ ತುಂಬಿದ ವಾಯು, ಸ್ವಾಧಿಷ್ಠಾನಚಕ್ರ ಎಂಬ ಪ್ರಜ್ಞಾಕೇಂದ್ರದಲ್ಲಿರುವ ಅಗ್ನಿತತ್ತ್ವವನ್ನು ಪ್ರಜ್ವಲಿಸುವಂತೆ ಮಾಡಿದಾಗ ಮೂಲಾಧಾರದಲ್ಲಿದ್ದ ಕುಂಡಲಿನಿ ಎಚ್ಚರಗೊಳ್ಳುತ್ತದೆ. ಅಲ್ಲೇ ಇರುವ ಬ್ರಹ್ಮಗ್ರಂಥಿಯನ್ನು ಭೇದಿಸಿ ಊರ್ಧ್ವಗಮನಮಾಡುತ್ತಾ ನಾಭಿದೇಶದಲ್ಲಿರುವ ಮಣಿಪೂರಚಕ್ರದಲ್ಲಿ ವಿಷ್ಣುಗ್ರಂಥಿಯನ್ನು ಭೇದಿಸಿ, ಮುಂದುವರೆಯುತ್ತಾ ಹೃದಯ ದೇಶದಲ್ಲಿರುವ ಅನಾಹತಚಕ್ರದಲ್ಲಿ ರುದ್ರಗ್ರಂಥಿಯನ್ನು ಭೇದಿಸಿ ಮುನ್ನಡೆಯುತ್ತದೆ. ಗುರುವಿನ ಆವಾಸವಾದ ಭ್ರೂಮಧ್ಯದ ಆಜ್ಞಾಚಕ್ರವನ್ನು ಸೇರಿ ಅಲ್ಲಿಂದ ನೆತ್ತಿಯಲ್ಲಿರುವ ಸಹಸ್ರಾರಚಕ್ರದಲ್ಲಿ ಶಿವನನ್ನು ಸೇರುತ್ತದೆ. **(ಸಹಸ್ರ ಕಮಲೇ ಶಕ್ತಿ: ಶಿವೇನ ಸಹಮೋದತೇ)** ಆಗಲೇ ಆನಂದಾನುಭವ. ಅದೇ ಪರಾಅವಸ್ಥೆ.[8]

ಹಠಯೋಗ ಪ್ರದೀಪಿಕೆಯಲ್ಲಿ ತಿಳಿಸುವಂತೆ–ಈ ಕುಂಡಲಿನಿಯು ಮಹಾಶಕ್ತಿ, ದಿವ್ಯಚೈತನ್ಯ, ಪತಿಯಾದ ಶಿವನಿಂದ ಪರಿತ್ಯಕ್ತಳಾದ, ದೀರ್ಘತಪಶ್ಚರ್ಯೆಯಲ್ಲಿ ನಿರತಳಾದ, ವ್ಯಸನದಿಂದ ಸುಪ್ತಳಾಗಿರುವ ಸತಿ. ಆದ್ದರಿಂದ ಬಾಲರಂಡಾ, ತಪಸ್ವಿನೀ ಎಂಬ ಹೆಸರುಗಳೂ ಇವೆ.

ಶರೀಫರ ಬಗ್ಗೆ ಬರೆಯುತ್ತಾ ಮಲ್ಲಾಡಿ ಹಳ್ಳಿಯ 'ತಿರುಕ' ಹೀಗೆ ವಿವರಿಸಿದ್ದಾರೆ. "**ಮೂಲಾಧಾರದಿಂದ ಕುಂಡಲಿನೀ ಶಕ್ತಿಯನ್ನು ಊರ್ಧ್ವಗಾಮಿಯನ್ನಾಗಿ ಉತ್ಥಾಪನಗೊಳಿಸಿದಾಗ ಅದರ ಜಾಗೃತಿಯಿಂದ ಆಂತರಿಕ ಸಂವೇದನೆ ಅನುಭವಕ್ಕೆ ಬರುವುದು, ಮೈರೋಮಾಂಚನ ಗೊಳ್ಳುವುದು, ಅವ್ಯಕ್ತ ಭೀತಿ ಉಂಟಾಗುವುದು**". **ಹಾವು ತುಳಿದೇನೆ** ಮತ್ತು ' **ಚೋಳಕಡಿತು**' ಎಂಬ ಪದಗಳಲ್ಲಿ ಈ ಕುಂಡಲಿನೀಯೋಗದ ಸಾಧನೆಯ ಮತ್ತು ಅನುಭೂತಿಯ ಚಿತ್ರಣ ಕಾಣಿಸುತ್ತದೆ.

*ಹಾವು ತುಳಿದೇನೆ ಮಾನಿನಿ*
*ಹಾವು ತುಳಿದೇನೆ*
*ಹಾವು ತುಳಿದು ಹಾರಿನಿಂತೆ*
*ಜೀವ ಕಳವಳಿಸಿತೆ ಗೆಳತಿ,*

*ದೇಹತ್ರಯದ ಸ್ಮೃತಿಯು ತಪ್ಪಿ*
*ದೇವಾನೀನೇ ಗತಿಯೋ ಎಂದೆ ।*

*ಹರಿಗೆ ಹಾಸಿಗೆಯಾದ ಹಾವು*
*ಹರನ ತೋಳಿನೊಳಿರುವ ಹಾವು*
*ಧರೆಯ ಹೊತ್ತು ಮೆರೆವ ಹಾವಿನ*
*ಶಿರವ ಮೆಟ್ಟಿದ ಶಿವನ ದಯದಿ ।*

*ಬೋಧಾನಂದವಾಗಿ ಬರಲು*
*ಹಾದಿಯೊಳಗೆ ಮಲಗಿ ಇರಲು*
*ಪಾದದಿಂದ ಪೊಡವಿಗೊತ್ತಲು*
*ನಾದಗೊಳಿಸಿತು ನಿಜದೆ ನೋಡಿ। ( ೨೬೪)*

ಮೊದಲಿಗೆ ಈ ಹಾಡಿನಲ್ಲಿ ಕಾಮದ ಆಮಿಷವನ್ನು ತಿಳಿಸಿದಂತೆ ತೋರುತ್ತದೆ. ಸರಳಾರ್ಥಕ್ಕಿಂತ ಹೆಚ್ಚಾದ ರಹಸ್ಯಾರ್ಥದ ಸೂಚನೆಯನ್ನು ಇದು ನೀಡುತ್ತದೆ. ಹರಿಗೆ ಹಾಸುಗೆಯಾದ ಹಾವು: ವಿಷ್ಣು ಯೋಗನಿದ್ರೆಯಲ್ಲಿರುವವ, ತಾಮಸ ನಿದ್ರೆಯಲ್ಲ. ಹರನ ತೋಳಲ್ಲಿ ಇರುವ ಹಾವು: ಶಿವನು ನಿತ್ಯ ತಪಸ್ವಿ, ಯೋಗಾರೂಢ. ಭೂಮಿಯ ಹೊತ್ತು ನಿಂತ ಹಾವು ಆದಿಶೇಷ. ತನ್ನ ಅಕ್ಷದಲ್ಲಿ ಭೂಮಿ ನಿರಂತರವಾಗಿ ತಿರುಗುತ್ತದೆ. ಎಂದಿಗೂ ಆ ಕ್ರಮದಲ್ಲಿ, ವೇಗದಲ್ಲಿ ತಪ್ಪಿಲ್ಲ. ಅಂದರೆ ಎಲ್ಲೆಡೆ ಕುಂಡಲಿನೀ ಶಕ್ತಿಯ ರೂಪವನ್ನೇ ಗುರುತಿಸಬಹುದು. ಅಂತಹ ಹಾವಿನ ಶಿರವ ತುಳಿದಾಗ ಹೆಡೆ ಎತ್ತಿ ಕೆರಳುತ್ತದೆ. ಪ್ರತಿಕ್ರಿಯೆಗೆ ಸಿದ್ಧವಾಗುತ್ತದೆ. ಕುಂಡಲಿನೀಯಾದರೂ ಅಷ್ಟೇ ಸುಪ್ತವಾಗಿದ್ದನ್ನು ಜಾಗೃತಗೊಳಿಸುವಾಗ ಅನೂಹ್ಯ ಪರಿಣಾಮಗಳು ಎದುರಾಗುತ್ತದೆ. ಪ್ರಥಮತಃ ಆ ಶಕ್ತಿಯನ್ನು ಗುರುತಿಸಿ, ಪ್ರಚೋದಿಸಬೇಕಾದರೂ ಶಿವನ ದಯೆ ಇರಬೇಕು.

ಮೂಲಾಧಾರದಲ್ಲಿ ಸುಷುಮ್ನಾನಾಡಿಯ ದ್ವಾರ ಇದೆ. ಅದನ್ನೇ ಬ್ರಹ್ಮದ್ವಾರ ಎನ್ನುತ್ತಾರೆ. ಅದರಲ್ಲಿ ಮುಖವಿಟ್ಟು ಅದನ್ನು ಮುಚ್ಚಿ ಮಲಗಿದೆ ಕುಂಡಲಿನೀ ಸರ್ಪ. ಪದ್ಮಾಸನ, ವಜ್ರಾಸನಗಳನ್ನು ಮಾಡಿ, ವಾಮ ಪಾದದಿಂದ ಗುದದ್ವಾರವನ್ನು ಬಂಧಿಸಿ, ಪ್ರಾಣವಾಯುವಿನ ಒಂದಿಗೆ, ಅಧೋಗಾಮಿ ಯಾದ ಅಪಾನವಾಯುವನ್ನು ಊರ್ಧ್ವಗಾಮಿ ಮಾಡಬೇಕು. ಶರೀಫರ ನುಡಿ "ಬೋಧ ಆನಂದದ ಹಾದಿಯೊಳಗೆ ಇದ್ದ ಹಾವನ್ನು ಪಾದದಿಂದ ಪೊಡವಿಗೆ ಒತ್ತಲು". ಆಗ ಮೈಯ ಬಿಸಿ ಏರುತ್ತದೆ. ಮೂಲಾಧಾರದಿಂದ ಭ್ರೂಮಧ್ಯವರೆಗಿನ ಹಾದಿಯಲ್ಲಿ ಶಕ್ತಿಚಾಲನೆ ನಡೆಸಿದಾಗ, ಓಂಕಾರವನ್ನೋ ಸೋಹಂ ಮಂತ್ರವನ್ನೋ ಜಪಿಸಿದಾಗ, ಅಂತರ್ನಾದದ ಅನುಭವ, ಆನಂದದ ಲಾಭ, 'ನಾದಗೊಳಿಸಿತು ನಿಜದಿ ನೋಡಿ'.

ಶಿವಶಕ್ತಿಯೋಗದ ಆ ಅದ್ಭುತ ಅನುಭವ, ಈವರೆಗೆ ಎಂದಿಗೂ ಕಾಣದ ಆನಂದಸ್ವರೂಪ ಅಚ್ಚರಿಯನ್ನೂ, ಭೀತಿಯನ್ನೂ ಮೂಡಿಸುತ್ತದೆ. ಹಾವು ತುಳಿದರೆ ಹಾರಿ ನಿಲ್ಲುವ ಪ್ರತಿಕ್ರಿಯೆ ಪ್ರಥಮ. ಆಮೇಲೆ ಭಯ, ಜೀವಕ್ಕೆ ಕಳವಳ. ತನ್ನ ದೇಹದ ಶಕ್ತಿಸಾಮರ್ಥ್ಯಗಳ ಅರಿವು ಮರೆಯಾಗುತ್ತದೆ. **'ಓ ದೇವಾ'** ಎಂಬ ಪ್ರಾರ್ಥನೆ ಒಡಮೂಡುತ್ತದೆ. ಶರೀಫರು ಕುಂಡಲಿನೀ ಜಾಗೃತಿಯನ್ನು ಹೊಂದಿದಾಗ ಇದಕ್ಕೆ ಸಮಾನವಾದ ಅನುಭವ ಹೊಂದುತ್ತಾರೆ.[1] ಈ ವರೆಗೆ ದೇಹ– ವಾಕ್ – ಮನಗಳೆಂಬ ಕರಣತ್ರಯಗಳಲ್ಲಿ, ಜಾಗೃತ್–ಸ್ವಪ್ನ–ಸುಷುಪ್ತಿ ಎಂಬ ಅವಸ್ಥಾತ್ರಯಗಳಲ್ಲಿ, ಎದುರಿಸದ ಸನ್ನಿವೇಶ ಧುತ್ತನೆ ಮೂಡಿದಾಗ ಭಯಾಶ್ಚರ್ಯಗಳು ಸಹಜ. ಏನಿದು ಎಂಬ ಕಳವಳ ಆಗಿಯೇ ತೀರುತ್ತದೆ.

ಸ್ವಾಮಿ ಪ್ರಭವಾನಂದರು ಒಂದು ಕಡೆ ಹೀಗೆ ಬರೆದಿದ್ದಾರೆ. ಹಠಯೋಗದಲ್ಲಿ ಬರುವ ಅನೇಕ ಪ್ರಾಣಾಯಾಮಗಳು ಹಠಯೋಗದಲ್ಲಿ ಪ್ರಾವೀಣ್ಯತೆಯನ್ನು ಪಡೆದಿರುವ ಗುರುಗಳ ನೇತೃತ್ವದಲ್ಲಿ ಅವನ್ನು ಅಭ್ಯಸಿಸಿದರೂ, ಅಪಾಯಕರವೆ. ಅವು ಕೆಲವೊಮ್ಮೆ ದೇಹದ ಬೆಳವಣಿಗೆಗೆ ಅನುಕೂಲವಾಗಬಹುದು. ಆದರೆ ಅನೇಕ ವೇಳೆ ಮೆದುಳಿಗೆ ಹಾನಿಯನ್ನುಂಟು ಮಾಡುವುದು. ಈ ಅಭ್ಯಾಸ ಮಾಡಿದವರಲ್ಲಿ ಅನೇಕರು ಮನಸ್ಸಿನ ಸಮತೆಯನ್ನು ಕಳೆದುಕೊಂಡ ಉದಾಹರಣೆಗಳಿವೆ.[2] ಅನನುಭೂತಪೂರ್ವವಾದ ಈ ಅನುಭವದೊಂದಿಗೆ ದೇವಾ ನೀನೇ ಗತಿ ಎಂಬ ಮೊರೆಯೂ ಸಹಜವಾಗಿ ಹುಟ್ಟುತ್ತದೆ. ಭಗವದ್ಗೀತೆಯಲ್ಲಿ ಶ್ರೀ ಕೃಷ್ಣನ ವಿಶ್ವರೂಪದರ್ಶನ ನೋಡಿದ ಅರ್ಜುನ – ಭಯದಿಂದ ಕಂಪಿಸುತ್ತಾನೆ. ಹೆದರಿ ಹೆದರಿ ವಂದಿಸುತ್ತಾನೆ. ಮಾತನಾಡಲು ಸ್ವರವೇ ಬರಲೊಲ್ಲದು. ಅದೃಶ್ಯವಾದ, ಅನಭಿವ್ಯಕ್ತವಾದ ರೂಪ, ಅಭಿವ್ಯಕ್ತವಾಗಿ ದರ್ಶನಕ್ಕೆ ಒದಗಿದಾಗ, ಮನಸ್ಸು ಹರ್ಷಗೊಂಡರೂ ಭಯದಿಂದ ವ್ಯಥೆ ಪಡುತ್ತದೆ. ದೇವಾ, ವಿಶ್ವರೂಪವನ್ನು ಉಪಸಂಹರಿಸಿ, ಮೊದಲು ಪ್ರಸನ್ನರೂಪವನ್ನು ತೋರಿಸು ಎಂದು ಬೇಡುತ್ತಾನೆ.[2] ದೇವದರ್ಶನ ಮತ್ತು ಆತ್ಮದರ್ಶನ ಎರಡೂ ಸದೃಶ ಅನುಭವ ನೀಡುತ್ತವೆ.

'ಚೋಳ ಕಡಿತು' ಎಂಬ ಪದ ಕುಂಡಲಿನೀಜಾಗೃತಿಯನ್ನು, ಅದರ ಪರಿಣಾಮ ಸೂಚ್ಯವಾದರೂ ಸ್ಫುಟಾರ್ಥದಿಂದ ಹೇಳುತ್ತದೆ.

*ಚೋಳಕಡಿತು, ನನಗೊಂದು ಚೋಳ ಕಡಿತು*
*ಕಾಲ ಕತ್ತಲದೊಳಗ ಕೂತಿತ್ತು, ನನ್ನ*
*ಕಂಡು ಬಂತು*
*ಎಷ್ಟು ದಿನದ ಸಿಟ್ಟು, ಇಟ್ಟಿತ್ತೋ, ಮುಗಿಸಿ ಬಿಟ್ಟಿತು ।*

*ಯಾರಿಗ್ಹೇಳಿ ಏನಾದೀತು?*
*ಹುಟ್ಟಿದಮ್ಯಾಲ ಕಂಡದ್ದಿಲ್ಲ*
*ಕಷ್ಟ ಇದರದು ಶಿವನೇ ಬಲ್ಲ*
*ಘಟ್ಟಿಯಾಗಿ ಮಳ್ಳು ಚುಚ್ಚಿತ್ತು, ಮಾಯವಾಯ್ತು ॥*

*ಮೂರು ದೇಹದೊಳಗ ತಾನಿತ್ತು, ಪರಮಾತ್ಮ*
*ನಾದದೊಳಗ ತಾನು ಬೆಳೆದಿತ್ತು*
*ಸಾರಿಬಂದು ಎನ್ನ ನೋಡುತ*
*ಮೂರು ಲೋಕ ಬೆಳಗುವಂತೆ*
*ಮೀರಿದುನ್ಮನಿ ಹಾರಿನಿಂತಿತ್ತು, ಎಚ್ಚರವ ಚುಚ್ಚಿತು ॥*

*ದೇವರಾಮನಿ ಮೂಲೆಯೊಳಗಿತ್ತು, ಆಧಾರ ಹಿಡಿದು*
*ಊರ್ಧ್ವಮುಖಕೆ ಕೊಂಡಿ ಮಾಡಿತ್ತು*
*ಸ್ಥೂಲ ದೇಹದೊಳಗೆ ಮಲಗಿ*
*ಕಾಲ ಕಳೆದು ಕರ್ಮನುಂಗಿ*
*ಧ್ಯಾನದೊಳಗಾ ಚೇಳು ಇದ್ದಿತ್ತು, ಶಿಶುನಾಳಾಧೀಶನ*
*ಕಚ್ಚಿದೊಡನೆ ಎಚ್ಚರಾಗಿತ್ತು, ಹುಚ್ಚೇ ಹಿಡಿತು ।(೨೬೬)*

‘ಕಾಲಕತ್ತಲದೊಳಗ ಕೂತಿತ್ತು, ಮೂರು ದೇಹದ ಒಳಗೆ ತಾನಿತ್ತು, ಆಧಾರ ಹಿಡಿದು ದೇವರಾಮನಿ ಮೂಲೆಯೊಳಗಿತ್ತು’, ಈ ವಾಕ್ಯಸರಣಿಗಳು ದೇಹದೊಳಗೆ, ಮೂಲಾಧಾರದಲ್ಲಿ, ಬೆಳಕು ಇಲ್ಲದ ಸ್ಥಳದಲ್ಲಿ ರಹಸ್ಯವಾಗಿ ಇರುವ ಕುಂಡಲಿನಿಯನ್ನು ಸೂಚಿಸುತ್ತವೆ. ಗುದ ಹಾಗೂ ಜನನೇಂದ್ರಿಯದ ನಡುವಿನ ಸೂಕ್ಷ್ಮ ಪ್ರದೇಶವೇ ಮೂಲಾಧಾರ. ದೇಹದ ಎಲ್ಲ ನಾಡಿಗಳ ಉಗಮ ಸ್ಥಾನ. ‘ದೇವರ ಮನಿ’ ಎಂದರೆ ದೇಹವೇ ಜೀವರೂಪಿ ಶಿವನ ದೇಗುಲ ಎಂದು.

‘ಸ್ಥೂಲ ದೇಹದೊಳಗೆ ಮಲಗಿ, ಕಾಲ ಕಳೆದು ಕರ್ಮನುಂಗಿ, ಧ್ಯಾನದೊಳಗಾ ಚೇಳು ಇದ್ದಿತ್ತು’–ಈ ವರ್ಣನೆ ಸುಪ್ತಾವಸ್ಥೆಯ ಕುಂಡಲಿಯನ್ನು ಕುರಿತಾದುದು. ಹಠ ಯೋಗದಲ್ಲಿ ಹೇಳಿದ, ಕುಂಡಲಿನಿಯ ದೀರ್ಘ ತಪಶ್ಚರ್ಯೆಯನ್ನು ಸೂಚಿಸುತ್ತದೆ. ‘ಆಧಾರ ಹಿಡಿದು ಊರ್ಧ್ವಮುಖ ಕೊಂಡಿ ಮಾಡಿತ್ತು’-ಸುಷುಮ್ನಾ ನಾಡಿಯ ದ್ವಾರದಲ್ಲಿ–ಬ್ರಹ್ಮ ದ್ವಾರದಲ್ಲಿ ಮುಖ ಮುಚ್ಚಿಕೂತಿರುವ ಕುಂಡಲಿಯನ್ನು ನಿರೂಪಿಸುತ್ತದೆ. ಯೋಗಚೂಡಾಮಣಿ ಉಪನಿಷತ್ತಿನಲ್ಲಿ ಹೇಳಿರುವಂತೆ ಯಾವ ದ್ವಾರದಿಂದ ಅನಾಮಯವಾದ ಬ್ರಹ್ಮದ್ವಾರ ಸೇರಬೇಕೋ, ಅದನ್ನು ತನ್ನ ಮುಖದಿಂದ ಮರೆಮಾಡಿ ಕುಳಿತಿರುವ ಪರಮೇಶ್ವರಿ, ಈ ಕುಂಡಲೀ ಶಕ್ತಿ.

**೬.೨ ನಾದ ಯೋಗ:**

ನಾದಂಯೋಗದೊಳಗೆ ತಾನು ಬೆಳೆದಿತ್ತು, ಮೂರು ಲೋಕ ಬೆಳಗುವಂತೆ, ಮೀರಿದ ಉನ್ಮನಿ ಹಾರಿ ನಿಂತಿತ್ತು, ಎಚ್ಚರವ ಚುಚ್ಚಿತು’ –ಈ ಸಾಲುಗಳು ಕುಂಡಲಿನೀಉತ್ಥಾಪನ ಹಂತಗಳನ್ನು ಹಾಗೂ

ಅಂತಿಮಪರಿಣಾಮವಾದ ಸಮಾಧಿಸ್ಥಿತಿಯನ್ನು ವಿವರಿಸುತ್ತವೆ. ಕೀಲಿಕೈಯಿಂದ ಬೀಗ ತೆಗೆದು, ಬಾಗಿಲ ತೆರೆವಂತೆ, ಯೋಗಿ ಮೋಕ್ಷದ್ವಾರವನ್ನು ಕುಂಡಲಿನಿಯಿಂದ ತೆರೆಯುತ್ತಾನೆ.' ಶರೀರಕ್ಕೆ ಸಹಜವಾದ ಉಸಿರಾಟವನ್ನು ಯೋಗಬದ್ಧಗೊಳಿಸಿ, 'ಸೋಹಂ' ಎಂಬ ಮಂತ್ರವನ್ನು ಶ್ವಾಸನಿಶ್ವಾಸಗಳಲ್ಲಿ ಅನುಸಂಧಾನ ಮಾಡಿ ೨೧೬೦೦ ಬಾರಿ ಜಪಿಸುತ್ತಾ, ಹೃದಯದಲ್ಲಿ ಆತ್ಮನನ್ನು ಧ್ಯಾನಿಸುವಾಗ ಅಂತರ್ನಾದದ ಅನುಭವ ದೊರೆಯುತ್ತದೆ. ಹಂಸೋಪನಿಷತ್ತಿನ ಪ್ರಕಾರ ಚಿಣಿ-ಚಿಂಚಿಣಿ-ಘಂಟಾ-ಶಂಖ- ತಂತ್ರೀ-ಕಾಲ -ವೇಣು-ಮೃದಂಗ-ಭೇರಿ -ಮೇಘ ಎಂಬ ದಶವಿಧ ನಾದಗಳು ಕೇಳಿಸುತ್ತವೆ. ಸಾಧಕನು ಪ್ರತಿಯೊಂದು ನಾದವು ಶ್ರವಣವಾದಂತೆ ಮುಂದಿನ ಹಂತಕ್ಕೆ ತೆರಳಲು ಹೆಚ್ಚು ಅಭ್ಯಾಸ ನಡೆಸಬೇಕು. ಈ ನಾದಾನುಸಂಧಾನವು ಸಮಾಧಿಯ ಪೂರ್ವಸ್ಥಿತಿ. ಆಯಾನಾದವು ಶ್ರವಣವಾಗುತ್ತಿದ್ದಂತೆ ಸಾಧಕನಲ್ಲಿ ಅವನ ಯೋಗಕ್ರಿಯೆಗೆ ಸಂವಾದಿಯಾದ ದೈಹಿಕಪ್ರತಿಕ್ರಿಯೆಯ ಅನುಭೂತಿ ದೊರೆಯುತ್ತದೆ. ಮೊದಲಿಗೆ ದೇಹದ ಕ್ಷೀಣತೆ-ಕ್ಲೇಶ-ಬೆವರು-ತಲೆನಡುಕ -ಬಾಯಲ್ಲಿ ಜೊಲ್ಲು ಒಸರುವುದು -ಅಮೃತ ರಸಾನುಭವ-ಗುಟ್ಟನ್ನು ತಿಳಿವ ವಿಜ್ಞಾನ -ಪರಾವಾಕ್‌ನ ದರ್ಶನ - ದಿವ್ಯ ದೃಷ್ಟಿ ಕೊನೆಯದಾಗಿ ಬ್ರಹ್ಮಾತ್ಮ ಭಾವದ ಪ್ರಾಪ್ತಿ.

ಎಷ್ಟು ದಿನ ಸಿಟ್ಟು ಇಟ್ಟಿತೋ, ಮುಗಿಸಿ ಬಿಟ್ಟಿತು ಮತ್ತು ಗಟ್ಟಿಯಾಗಿ ಮುಳ್ಳು ಚುಚ್ಚಿತ್ತು, ಮಾಯವಾಯ್ತು, ಎಂಬ ಸಾಲುಗಳು ಉನ್ಮನೀಪ್ರಾಪ್ತಿಯ ಪೂರ್ವದ ಮತ್ತು ಅನಂತರದ ಅನುಭವಗಳನ್ನು ವಿವರಿಸುತ್ತದೆ. ನೆತ್ತಿಯಲ್ಲಿನ ಸಹಸ್ರಾರಕಮಲದಲ್ಲಿ ನೆಲೆಸಿದ ಶಿವನು ಪತಿ, ಮೂಲಾಧಾರದಲ್ಲಿರುವ ಕುಂಡಲಿನೀ ಸತಿ, ವಿರಹದಿಂದ ತಪಸ್ವಿನಿಯಾಗಿರುವಳು. ಇವರ ಸಮಾಗಮ ಮಾಡಿಸಿ, ಶಿವ-ಶಕ್ತಿಯರ ಸಮ್ಮಿಲನದಿಂದ ಆನಂದ ಪಡೆವ ಕರ್ತವ್ಯ ಸಾಧಕನದ್ದು. ಆದರೆ ಪ್ರತಿಯೊಬ್ಬ ಮನುಷ್ಯ ಸಾಧಕನಾಗಲಾರ. ಸಾಧಕನಾಗಲು ಪ್ರೇರಣೆಬೇಕು, ಉಪದೇಶ ಬೇಕು, ಸಾಧನೆ ಬೇಕು, ಕೊನೆಗೆ ಗುರಿತಲುಪಬೇಕು. ಅನೇಕ ಕಾಲದ ಅಭ್ಯಾಸದಿಂದ ಕುಂಡಲಿನೀ ಜಾಗೃತಿ ಹೊಂದಬಹುದು. ಇಷ್ಟು ವಿಳಂಬ ಮಾಡಿದ ಕಾರಣ, ಸಿಟ್ಟಾದ ಸತಿ, ಒಂದೇ ಬಾರಿಗೆ ಅನಿರ್ವಚನೀಯವಾದ ಅನುಭವ ನೀಡುವ ಮೂಲಕ ಅದನ್ನು ತೀರಿಸಿಕೊಂಡಳು.

'ಹುಟ್ಟಿದ ವ್ಯಾಲೆ ಕಂಡದ್ದಿಲ್ಲ, ಕಷ್ಟ ಇದರದು ಶಿವನೇ ಬಲ್ಲ' ಎಂಬ ವಾಕ್ಯಗಳು ಆ ವಿಶೇಷಾನುಭವದ ಅಭೂತಪೂರ್ವತೆಯನ್ನು, ಅದರ ಮಹದ್ಭಾರವನ್ನು ಪ್ರಾಮಾಣಿಕವಾಗಿ ತಿಳಿಸುತ್ತದೆ. ಈ ಪದದ ವಿಶಿಷ್ಟತೆಯನ್ನು ಡಾ। ಎನ್ ಎಸ್ ಲಕ್ಷ್ಮೀನಾರಾಯಣ ಭಟ್ಟರು (ಪುಟ 36)-'ಶರೀಫರ ಕಾವ್ಯ ಅನುಭಾವಮುಖವಾದ್ದು. ಅನುಭಾವಸಂಬಂಧದ ಸಂವೇದನೆಗಳು ರಹಸ್ಯಾತ್ಮಕವಾದವು. ನೇರವರ್ಣನೆಗೆ ಸಿಗದ ಇವು ಪ್ರತೀಕಾತ್ಮಕಅಭಿವ್ಯಕ್ತಿಯನ್ನು ಬೇಡುವುದು

ಅನಿವಾರ್ಯವೂ ಹೌದು. ಇಂಥ ಪ್ರತೀಕ ಅರ್ಥದ ಅಂಚಿನೊಳಗೆ ಪೂರ ಮೈಬಿಚ್ಚದೆ, ಓದುಗನ ಅರಿವಿನ ಪರಿಧಿಯೊಳಗೆ ತನ್ನ ರಹಸ್ಯವನ್ನು ಪೂರ ದ್ರವಿಸದೆ, ಅವನ ಅರಿವನ್ನು ಕೆಣಕುವ, ಕಾಡುವ, ಅದಕ್ಕೆ ಕಚಗುಳಿ ಇಡುವ, ಧ್ವನಿದಟ್ಟ ಶಬ್ದ ಚಿತ್ರವಾಗುತ್ತದೆ. ತನ್ನ ಆಳಮನಸ್ಸಿನ ಕತ್ತಲಲ್ಲಿ ಅಡಗಿದ್ದ ಆಧ್ಯಾತ್ಮಿಕದ್ರವ್ಯ ಹಠಾತ್ತನೆ ಹೊರ ಹರಿದು ಲೌಕಿಕ ಬದುಕನ್ನು ಯಾತನಾಮಯವನ್ನಾಗಿ ಮಾಡಿ ಕಾಪಾಡಿದ್ದನ್ನು ಮಾರ್ಮಿಕವಾಗಿ ಹೇಳುತ್ತದೆ." ಎಂದು ವರ್ಣಿಸಿದ್ದಾರೆ.

ಎಚ್ಚರವ ಚುಚ್ಚಿತ್ತು, ಕಚ್ಚಿದೊಡನೆ ಎಚ್ಚರಾಯ್ತು –ಎಂಬ ವಾಕ್ಯ ಜ್ಞಾನೋದಯವನ್ನು ಸೂಚಿಸುತ್ತವೆ. ಕುಂಡಲಿನಿಶಕ್ತಿಯ ಜಾಗೃತಿಯು ಎಚ್ಚರ ಅಂದರೆ ಜ್ಞಾನವನ್ನು ಪ್ರಚೋದಿಸಿತು. ವಿದ್ಯುದಾಘಾತದಂತೆ, ಅದು ಪ್ರೇರಿಸಿದ ತತ್ಕ್ಷಣ ಅರಿವು ಮೂಡಿತು. ನಾದಾನುಭವವನ್ನು ವಿವರಿಸಿದ ಮೇಲೆ ಮುಂದಿನ ಹಂತಗಳನ್ನು ಹೀಗೆ ಗುರುತಿಸಿದ್ದಾರೆ ಶರೀಫರು. ಗಿರಣಿಯ ಯಾಂತ್ರಿಕ ವ್ಯವಸ್ಥೆಯನ್ನು ಅದರ ಉಪಯೋಗದಿಂದ ಆಗುವ ಲಾಭವನ್ನು ಮೆಚ್ಚಿ ಅಚ್ಚರಿ ಪಡುತ್ತಿದ್ದಂತೆಯೆ, ಮನುಷ್ಯ ದೇಹವೆಂಬ ಯಂತ್ರವನ್ನು ಸಮನ್ವಯಿಸಿ ನೋಡುತ್ತಾರೆ.

*ಗಿರಣಿ ವಿಸ್ತಾರ ನೋಡಮ್ಮ. . .*
*ಜಲ ಅಗ್ನಿ ವಾಯು ಒಂದಾಗಿ, ಕಲೆತು ಚಂದಾಗಿ*
*ನೆಲದಿಂದ ಗಗನಕ್ಕೆ ಮುಟ್ಟಿದಂತೆಸೆವುದು*
*ಚೆಲುವ ಚೆನ್ನಿಗವಾದ ಕಂಭವೋ, ಹೊಗಿಯ ಬಿಂಬವೋ ।*
*ಒಳಗೊಂದು ಬೇರೆ ಆಕಾಶ, ತಿಳಕೋ ಚಮತ್ಕಾರ*
*ದಳಗಳೊಂಬತ್ತು ಚಕ್ರ ಸುಳಿದ ಸೂತ್ರದಾರದಲ್ಲಿ*
*ಲಾಳಿ ಮೂರು ಕೊಳವಿಯೊಳು, ಎಳೆ ತುಂಬಿತದರೊಳು ।*

*ಅಲ್ಲಿ ಬರದಿಟ್ಟರಳಿಹಿಂಜಿ, ಅಲ್ಯಾದವು ಹಂಜಿ*
*ಗಾಲಿ ಎರಡರ ಮೇಲೆ ಮೂಲ ಬ್ರಹ್ಮದ ಕೀಲ*
*ನಾಡಿ ಸುಷುಮ್ನನು ಕೂಡಿ, ಆಯ್ತೋ ಕುಕ್ಕಡಿ ।*
*ಪರಬೊಮ್ಮನ ಪಟ್ಟಾವೋ ಅಲ್ಲೇ*
*ಪ್ರಾಣವನು ಮರತಿಟ್ಟವೋ . . . . .( ೧೬೨)*

ಜಲ ಅಗ್ನಿ ವಾಯು ಒಂದಾಗಿ . . . ಈ ಸಾಲುಗಳು ಬೆಡಗಿನ ವಚನಗಳಂತೆ ಗೂಢಾರ್ಥ ಉಳ್ಳವು. ಅರ್ಥೈಸಿಕೊಳ್ಳಲು ಯೋಗಸಾಧನೆಯ ಸಂಪ್ರದಾಯದ ಪರಿಚಯ ಬೇಕೇ ಬೇಕು. ಶಾಕ್ತ ಯೋಗಿಯಾದ ಗೋವಿಂದಭಟ್ಟರ ಉಪದೇಶದ ಕುರುಹನ್ನು ಇವೆಲ್ಲ ಕುಂಡಲಿನೀಯೋಗದ ಪದಗಳಲ್ಲಿ ಗುರುತಿಸಬಹುದು. ಶಂಕರಾಚಾರ್ಯವಿರಚಿತ ಸೌಂದರ್ಯಲಹರಿ–ದೇವೀ ಉಪಾಸನೆಗೆ – ಶಕ್ತಿಆರಾಧನೆಗೆ ಸಂಬಂಧಿಸಿದ ಮಂತ್ರತಂತ್ರಶಾಸ್ತ್ರಗರ್ಭಿತವಾದ ಅದ್ಭುತರಚನೆ. ಅದರ ಒಂಬತ್ತನೆ ಪದ್ಯ ಮೂಲಾಧಾರಾದಿ ಷಟ್‌ಚಕ್ರಗಳು ಹಾಗೂ ಪಂಚಭೂತಗಳ ಸಂಬಂಧವನ್ನು ಹೇಳುತ್ತದೆ.

ಮೂಲಾಧಾರದಲ್ಲಿ ಪೃಥಿವೀ, ಮಣಿಪೂರದಲ್ಲಿ (ನಾಭಿ)ಜಳ ಸ್ವಾಧಿಷ್ಠಾನದಲ್ಲಿ(ಲಿಂಗ) ಅಗ್ನಿ, ಅನಾಹತದಲ್ಲಿ (ಹೃದಯ) ವಾಯು, ವಿಶುದ್ಧಿಯಲ್ಲಿ(ಕಂಠ) ಆಕಾಶ, ಆಜ್ಞಾಚಕ್ರದಲ್ಲಿ (ಭ್ರೂಮಧ್ಯ), ಮನಸ್ಸು ಹೀಗೆ–ಇವೆಲ್ಲವನ್ನು ಭೇದಿಸಿ ದೇವಿಯು ನೆತ್ತಿಯಲ್ಲಿರುವ ಸಹಸ್ರದಳಕಮಲದಲ್ಲಿ ಪತಿಯಾದ ಶಿವನೊಡನೆ ವಿಹರಿಸುತ್ತಾಳೆ. ಆಮೇಲೆ ಅಮೃತರಸ ಸಿಂಚನವನ್ನು ಮಾಡಿ ಪುನ: ಮೂಲಾಧಾರವನ್ನು ಸೇರಿ 'ಭುಜಗನಿಭಂ' 'ಅಧ್ಯುಷ್ಟ ವಲಯಂ' ಅಂದರೆ ಸರ್ಪವನ್ನು ಹೋಲುವಂತೆ ಕುಂಡಲಾಕೃತಿಯಿಂದ ವಿರಮಿಸುತ್ತಾಳೆ.

ಈ ಹಿನ್ನೆಲೆಯಲ್ಲಿ ಪದದ ಅವಲೋಕನ ಮಾಡುವಾಗ, ಕುಂಡಲಿನೀಶಕ್ತಿಸಂಚಾರವನ್ನೇ ಶರೀಫರು ಹೇಳಿದ್ದೆಂದು ತಿಳಿಯಬಹುದು. ಜಲ –ಅಗ್ನಿ–ವಾಯು ಎಂಬ ತತ್ತ್ವಗಳಿರುವ ಮಣಿಪೂರ ಸ್ವಾಧಿಷ್ಠಾನ–ಅನಾಹತ–ಚಕ್ರಗಳನ್ನು ದಾಟುತ್ತಿರುವ ಪೃಥಿವೀಯಿಂದ –ಮೂಲಾಧಾರದಿಂದ ಹೊರಟ ಶಕ್ತಿ ಗಗನತತ್ತ್ವವನ್ನು –ವಿಶುದ್ಧಿಚಕ್ರವನ್ನು ಮುಟ್ಟುತ್ತಿರುವಂತೆ ಕಾಣಿಸುವ ಚಂದವೇನು! ಚೆಲುವಿನ–ಚಂದದ ಕಂಬ–ಸುರುಳಿಯಾಗಿದ್ದಕುಂಡಲಿನೀ ನೇರವಾಗಿ ನಿಲ್ಲುತ್ತದೆ. ಬಿಸತಂತುವಿನಂತೆ, ಕೆಂಪು ಉಣ್ಣೆಯ ಎಳೆಯಂತೆ, ಹೊಳೆವ ಮಿಂಚಿನ ರೇಖೆಯಂತೆ ಹೀಗೆಲ್ಲಾ ಕುಂಡಲಿನಿಯನ್ನು ವರ್ಣಿಸಿದ್ದಾರೆ. ಹೊಗೆಯ ಬಿಂಬವೋ ಎನ್ನುತ್ತಾ ಶರೀಫರು ಅದರ ವ್ಯಕ್ತಾವ್ಯಕ್ತ ರೂಪವನ್ನು ತಿಳಿಸುತ್ತಾರೆ. ಮೂರು ಕೊಳವಿಯೊಳು, ಎಳೆ ತುಂಬತದೊರೊಳು, ನಾಡಿಸುಷುಮ್ನವ ಕೂಡಿ, ಆಯ್ತೋ ಕುಕ್ಕಡಿ ಎನ್ನುವ ಪದಜಾಲದಲ್ಲಿ, ಇಡಾ–ಪಿಂಗಲ–ಸುಷುಮ್ನ ಎಂಬ ಎಡ –ಬಲ–ಮಧ್ಯ ನಾಡಿಗಳನ್ನು ಸೂಚಿಸುತ್ತಾರೆ. ಕುಕ್ಕಡಿ ಎಂದರೆ ನಡುದಪ್ಪದ, ಅಂಚುಗಳು ಕೃಶವಾದ ನೂಲಿನ ಉಂಡೆ. ಅದನ್ನು ರೂಪಕವಾಗಿ ತೋರಿಸುತ್ತಾ, ಎಡಬಲದ ಇಡಾ ಪಿಂಗಲ ನಾಡಿಗಳಿಗಿಂತ ನಡುವಿನ ಸುಷುಮ್ನಾ ನಾಡಿಯು ಪ್ರಧಾನ ಹಾಗೂ ಕುಂಡಲಿನಿಯ ಸಂಚಾರದ ನಾಡಿ ಎಂದೂ ಸ್ಪಷ್ಟ ಪಡಿಸುತ್ತಾರೆ.

**'ದೇಹೋ ದೇವಾಲಯ: ಪ್ರೋಕ್ತ: ಜೀವೋ ಹಂಸಃ ಸದಾಶಿವಃ'** ಎಂಬ ವಚನದಂತೆ ದೇಹವೇ ದೇಗುಲ, ಜೀವನೇ ಶಿವ ಎಂದು ಉದ್ಘೋಷಿಸುವ ಪದವನ್ನು ಶರೀಫರು ರಚಿಸಿದ್ದಾರೆ.

*ಗುಡಿಯ ನೋಡಿರಣ್ಣಾ ದೇಹದ*
*ಗುಡಿಯ ನೋಡಿರಣ್ಣಾ ದೇಹದ*

*ಗುಡಿಯ ನೋಡಿರಿದು*
*ಪೊಡವಿಗೆ ಒಡೆಯನು*
*ಅಡಗಿಕೊಂಡು ಕಡುಬೆಡಗಿನೊಳಿರುತಿಹ*
*ಗುಡಿಯ ನೋಡಿರಣ್ಣಾ (೭೧)*

ಬಹುವಾಗಿ ಆಶ್ಚರ್ಯ ಪಡಿಸುವಂತೆ ನಿರ್ಮಿತವಾಗಿರುವ ದೇಹದ ಗುಡಿಯೊಳಗೆ ಜಗದೊಡೆಯನು ಅಡಗಿ ಕೊಂಡಿರುವನು.

*ಮೂರು ಮೊನೆಯ ಕಲ್ಲು, ಅದರೊಳು*
*ಜಾರುತಿಹ ಕಲ್ಲು*
*ಧೀರ ನಿರ್ಗುಣನು ಸಾರ ಸಗುಣದಲಿ*
*ತೋರಿ ಅಡಗಿ ತಾ ಬ್ಯಾರ್ಯಾಗಿರುತಿಹ*
*ಗುಡಿಯ ನೋಡಿರಣ್ಣಾ!*

ಸ್ಥೂಲ-ಸೂಕ್ಷ್ಮ-ಕಾರಣಗಳೆಂಬ ಮೂರು ಕಲ್ಲುಗಳು. ಅದರಲ್ಲಿ ಚಲಿಸುತ್ತಿರುವ ಪರಮಾತ್ಮ. ಸ್ವತ: ನಿರ್ಗುಣನಾಗಿದ್ದರೂ ಅಂದರೆ ಸತ್ತ್ವ-ರಜ-ತಮ ಎಂಬ ಗುಣಗಳನ್ನು ಮೀರಿದವನಾಗಿದ್ದರೂ, ಸಗುಣರೂಪದಲ್ಲಿ ತೋರುತ್ತಾನೆ. ಒಳಗೇ ಇದ್ದರೂ ಲೇಪವಿಲ್ಲದೆ ಬೇರೆಯಾಗಿ ಇದ್ದಾನೆ.

*ಆರುಮೂರು ಕಟ್ಟಿ, ಮೇಲಕ್ಕೆ*
*ಏರಿದವನು ಘಟ್ಟಿ*
*ಭೇರಿ, ಕಹಳಿ ಶಂಖ*
*ಭಾರಿ ಸುನಾದದಿ*
*ಮೀರಿದಾನಂದ ತೋರಿ ಹೊಳೆಯುತಿಹ*
*ಗುಡಿಯ ನೋಡಿರಣ್ಣಾ !*

ನವದ್ವಾರಗಳಲ್ಲಿ ಹರಿಯುವ ಮನಸ್ಸನ್ನು ಕಟ್ಟಿ, ಮೇಲಕ್ಕೆ –ಎತ್ತರಕ್ಕೆ ಏರುವವನೇ ಗಟ್ಟಿ. ಹಾಗೆ ಏರುವಾಗ ನಾದಾನುಭವ, ತಲ್ಲೀನತೆ. ಭೇರಿ–ಕಹಳೆ–ಕಂಬ ಮುಂತಾದ ಭಾರಿ ಸುನಾದಗಳಲ್ಲಿ? – ಈ ವಾಕ್ಯ ವಿವರಣೆಗೆ 'ನಾದ ಬಿಂದೂಪನಿಷತ್' (೩೦– ೫೦) ಸಹಾಯ ಮಾಡುತ್ತದೆ.

ನಾದವೆಂದರೆ ಜ್ಯೋತಿರ್ಮಯನಾದ ಶಿವ. ಬ್ರಹ್ಮನನ್ನು–ಓಂಕಾರವನ್ನು ಸಂಧಾನಗೊಳಿಸುವಂತದ್ದು. ಇದರಿಂದಾಗಿ ಮೋಡ ದೂರವಾದಾಗ ಸೂರ್ಯದರ್ಶನವಾಗುವಂತೆ, ಆತ್ಮವು ಸ್ವಯಂ ಆವಿರ್ಭಾವ ಆಗುತ್ತದೆ. ಸಿದ್ಧಾಸನದಲ್ಲಿ ಕುಳಿತು, ವೈಷ್ಣವೀಮುದ್ರೆಯನ್ನು ಬಂಧಿಸಿದಾಗ ಬಲಗಿವಿಯಲ್ಲಿ ಅಂತರ್ನಾದವು ಬಗೆಬಗೆಯಾಗಿ ಕೇಳಿಸುತ್ತದೆ. ಮೇಘದ ಗುಡುಗು–ಭೇರಿ – ಜಲಪಾತ–ಮದ್ದಲೆ–ಗಂಟೆ–ಕಹಳೆ–ಕಿಂಕಿಣೀ– ಕೊಳಲು–ವೀಣಾ–ದುಂಬಿಯ ಝೇಂಕಾರ ಹೀಗೆ. ಹಾಲು–ನೀರು ಅವಿಭಾಜ್ಯವಾಗಿ ಒಂದಾಗುವಂತೆ, ಹೊರಅರಿವನ್ನು ಮರೆತು ನಾದದಲ್ಲಿ ಚಿದಾಕಾಶದಲ್ಲಿ ಸಾಧಕ ಲೀನವಾಗುತ್ತಾನೆ. 'ಉನ್ಮನೀ' ಅವಸ್ಥೆಗೆ ಇದು ಆಧಾರ. ಮಕರಂದಪಾನದಲ್ಲಿ ಮಗ್ನವಾದ ದುಂಬಿ ಹೂವಿನ ಪರಿಮಳವನ್ನು ಲೆಕ್ಕಿಸುವುದಿಲ್ಲ. ಹಾಗೆಯೇ ನಾದಾಸಕ್ತಮನಸ್ಸು, ಅನ್ಯ ವಿಷಯಗಳನ್ನು ಬಯಸುವುದಿಲ್ಲ. ಮನವೆಂಬ ಉನ್ಮತ್ತ ಗಜವನ್ನು, ಅಂತರಂಗವೆಂಬ ಜಿಂಕೆಯನ್ನು, ಸರ್ಪವನ್ನು, ಸಮುದ್ರವನ್ನು ನಿಯಂತ್ರಿಸುವ ಆಯುಧವಿದು. ನಾದವು

ಇರುವವರೆಗೆ ಆಕಾಶದ ಸಂಕಲ್ಪ, ಅಲ್ಲಿಯವರೆಗೆ ಮನ. ಅದು ಯಾವಾಗ ನಿ:ಶಬ್ದವಾಯಿತೋ ಆಗ ಆಕಾಶವನ್ನು ಮೀರಿ ಬ್ರಹ್ಮಪದದ ಪ್ರಾಪ್ತಿ. ಅದೇ ಮನೋನ್ಮನೀ. ಮಹಾನಾದಗಳನ್ನು ಮೀರಿದ ಅವಸ್ಥೆಯಲ್ಲಿ ಆನಂದವೇ ಆನಂದ. ಅದೇ ಶಿವ ಸ್ವರೂಪ, ಅದೇ ಆತ್ಮ ಸ್ವರೂಪ. ಹಂಸೋಪನಿಷತ್ ಹೇಳುತ್ತದೆ-'ಅವನಲ್ಲಿ ಮನಸ್ಸು ವಿಲೀನವಾಗುತ್ತದೆ, ಮನಸ್ಸಿನಲ್ಲಿ ಸಂಕಲ್ಪ-ವಿಕಲ್ಪಗಳು ಲಯವಾಗುತ್ತವೆ. ಪುಣ್ಯ ಪಾಪಗಳೆಂಬ ದ್ವಂದ್ವ ಸುಟ್ಟು ಹೋಗುತ್ತದೆ. ಸರ್ವ ವ್ಯಾಪ್ತನಾದ, ಶಕ್ತ್ಯಾತ್ಮಕನಾದ ಸದಾಶಿವ ಸ್ವಯಂಪ್ರಕಾಶನಾಗಿ, ಶುದ್ಧ- ಬುದ್ಧ-ನಿತ್ಯ-ನಿರಂಜನ - ಶಾಂತ ಸ್ವರೂಪದಲ್ಲಿ ಗೋಚರನಾಗುತ್ತಾನೆ".

*ಸಾಗುತಿಹವು ದಿವಸ, ಬಹುದಿನ*
*ಹೋಗಿ ಮಾಡಿ ವಾಸ*
*ಯೋಗಿರಾಜ ಶಿಶುನಾಳಧೀಶ, ತಾ –*
*–ನಾಗಿ ಪರಾತ್ಪರ ಬ್ರಹ್ಮರೂಪನಿಹ*
*ಗುಡಿಯ ನೋಡಿರಣ್ಣಾ ॥*

ಕುಂಡಲಿನೀಯೋಗದಲ್ಲಿ, ಕುಂಡಲಿನಿಯು ಜಾಗೃತವಾಗಿ ನಾಡಿಯಲ್ಲಿ ಪ್ರವಹಿಸಿ ಶಿವನೊಡನೆ ಈ ಶಕ್ತಿ ಐಕ್ಯವಾದಾಗ, ಜೀವಾತ್ಮ-ಪರಮಾತ್ಮ ಸಂಯೋಗವಾದಂತೆ. ಆಗ ಶಕ್ತಿಯು ಮಾಯವಾಯ್ತು, ಜೀವನು ಮಾಯವಾದ. ಕೇವಲಾತ್ಮಭಾವ, ಕೈವಲ್ಯಪ್ರಾಪ್ತಿ, ಪರಿಪೂರ್ಣ ಆನಂದ. ಮೈತ್ರಾಯಣೀಉಪನಿಷತ್ತು(೬.೨೧) ಸುಷುಮ್ನಾ ಎಂಬ ಹೆಸರಿನ ಊರ್ಧ್ವಮುಖಿಯಾದ ಪ್ರಾಣಸಂಚಾರಿಣಿಯಾದ ನಾಡಿ, ತಾಲುವಿನಲ್ಲಿ ಅಂದರೆ ಆಜ್ಞಾಚಕ್ರದಲ್ಲಿ ಕೊನೆಯಾಗುವ ನಾಡಿ. ಅದರಿಂದ ಊರ್ಧ್ವಕ್ಕೆ ಗಮನಿಸಿದಾಗ ನಿರಾತ್ಮಕತ್ವವನ್ನು ಹೊಂದುತ್ತಾನೆ. ನಿರಾತ್ಮಕನು ಸುಖ ದು:ಖಗಳನ್ನು ಪಡೆಯುವುದಿಲ್ಲ. 'ಕೇವಲ'ನಾಗುತ್ತಾನೆ. ಎಂದು ವಿವರಿಸುತ್ತದೆ. ಯೋಗಶಿಖೋಪನಿಷತ್ತು-ಕಾಮ –ಕ್ರೋಧ-ಭಯ-ಮೋಹ-ಲೋಭ-ರಾಜಸತ್ತ್ವ-ಜನ್ಮ-ಮರಣ-ಕಾರ್ಪಣ್ಯ-ಶೋಕ-ನಿದ್ರೆ- ಹಸಿವು-ಬಾಯಾರಿಕೆ ನಾಚಿಕೆ-ದು:ಖ. ವಿಷಾದ-ಸಂತೋಷಗಳು ಎಂಬ ದೋಷಗಳಿಲ್ಲದ ಜೀವನೇ -ಶಿವನು ಎನ್ನುತ್ತದೆ. ಮಾತ್ರವಲ್ಲ, ಯೋಗಹೀನವಾದ ಜ್ಞಾನ, ಜ್ಞಾನಹೀನವಾದ ಯೋಗ, ಇವೆರಡೂ ಮೋಕ್ಷವನ್ನು ನೀಡಲಾರವು. ಹಾಗಾಗಿ ಮುಮುಕ್ಷುವಾದವನು ಜ್ಞಾನವನ್ನು ಮತ್ತು ಯೋಗವನ್ನು ದೃಢವಾಗಿ ಅಭ್ಯಾಸಮಾಡಬೇಕು ಎಂದು ವಿಧಿಸಿದೆ. ಜ್ಞಾನಮಾರ್ಗ ಹಾಗೂ ಯೋಗ ಮಾರ್ಗಗಳ ಸಂಮಿಲನವೇ ಜೀವನ್ಮುಕ್ತರಾದ ಅವಧೂತರ ಅಂತ:ಶಕ್ತಿಯ ಮೂಲ ಸ್ರೋತ.

*******

**ಟಿಪ್ಪಣಿ**

೧) ಯೋಗ ಶಿಖೋಪನಿಷತ್ : ೧ –೬೮, ೭೪

೨) ಶಾರದಾತಿಲಕ ತಂತ್ರ – ಅಧ್ಯಾಯ ೨೫ ಶ್ಲೋಕ –೩೦, ೩೪, ೩೫, ೩೬)

೩) ತ್ರಿಶಿಖಿ ಬ್ರಾಹ್ಮಣೋಪನಿಷತ್ – ೮೫ – ೮೬

೪) ಬೃಹದ್ಯೋಗ ದರ್ಶನ – ಹಠಯೋಗ – ಪುಟ ೨೮

೫) ಯೋಗ ಕುಂಡಲೀ ಉಪನಿಷತ್ ೧–೮೬

೬) ಶಬ್ದಾರ್ಥ ಕೌಸ್ತುಭ – ಪುಟ ೭೪೦

# ಅಧ್ಯಾಯ -೭

೭.೧ ಆತ್ಮಬೋಧ - ಅದ್ವೈತಾನುಭವ.

೭.೨ ತತ್ವಜ್ಞಾನಿಗಳ ಸ್ವರೂಪವಿವರಣೆ.

೭.೩ ಅದ್ವೈತತತ್ತ್ವನಿರೂಪಣೆ.

೭.೪ ಅವಧೂತಲಕ್ಷಣ.

# ಅಧ್ಯಾಯ ೭

## ೭.೧ ಆತ್ಮಬೋಧ-ಅದ್ವೈತಾನುಭವ

ಆತ್ಮಾರ್ಥಿಯಾಗಿ ಜಜ್ಞಾಸುವಾದ ಸಾಧಕನು ಗುರೂಪದೇಶದಂತೆ ಶಾಸ್ತ್ರವಚನ ಪ್ರಮಾಣಗಳಂತೆ ತನಗೆ ಉಚಿತವಾದ ಸಾಧನೆಯನ್ನು ಪೂರೈಸುತ್ತಾ ಯಥಾರ್ಥವಾದ ತತ್ತ್ವಜ್ಞಾನವನ್ನು ಪಡೆಯಬೇಕು. ಹೊಟ್ಟೆಪಾಡಿಗೋ, ಪ್ರದರ್ಶನಕ್ಕೋ, ಕೀರ್ತಿ ಸಂಪಾದನೆಗೋ ಇವು ಉಪಯೋಗವಾಗಬಾರದು. ಸಾಧನೆಯ ಫಲವಾಗಿ, ಅಪರಿಮಿತವಾದ ಅನಂದ ಲಾಭವಾದರೆ ಮಾಡಿದ ಯತ್ನ ಸಾರ್ಥಕ. ಶರೀಫರು ತಾವು ಸಂಪಾದಿಸಿದ ಪರಮಾತ್ಮನ, ಪರಮಾರ್ಥದ ದರ್ಶನಾನುಭವಗಳನ್ನು ಸರಳವಾಗಿ ಸೊಗಸಾಗಿ ಚಿತ್ರಿಸುತ್ತಾರೆ.

*ಇದೇ ಬ್ರಹ್ಮಜ್ಞಾನ ನೋಡಿಕೋ*
*ಸದಾನಂದ ಪರಮಾತ್ಮ ಬೋಧಮಯ (೬೧)*

– ಎನ್ನುತ್ತಾ ಪರಮಾತ್ಮನು ಆನಂದಸ್ವರೂಪ ಮತ್ತು ಜ್ಞಾನಸ್ವರೂಪ ಎನ್ನುತ್ತಾರೆ.

*ಸದಾನುದಿನ ನಿಜ ಹೃದಯಕಮಲದಲಿ*
*ಸುಧಾಕಿರಣ ಗುರುಪದಾಬ್ಜ ಕಂದರೆ, ಇದೇ..........*

ಸಾಧಕನು ತನ್ನ ಗುರುಚರಣಗಳನ್ನು ಧ್ಯಾನಿಸುತ್ತಾ ಅಮೃತಕಿರಣಗಳು ಹೃದಯ ತುಂಬುವುದನ್ನು ಕಂಡರೆ ಅದೇ ಬ್ರಹ್ಮಜ್ಞಾನ. ಗುರು, ದೇವತೆ ಮತ್ತು ಆತ್ಮ ಇವರನ್ನು ಏಕರೂಪವಾಗಿ ಕಾಣುತ್ತಾ ಧ್ಯಾನ-ಜಪ-ಪೂಜೆಗಳನ್ನು ಮಾಡಬೇಕು ಎಂದು ವಿಧಿಸುತ್ತವೆ ಶಾಸ್ತ್ರಗಳು. ನಿಧಾನದಲಿ ಎಂಬಲ್ಲಿ ಮೂರು ಅರ್ಥಗಳು ತೋರುತ್ತವೆ[೧]. ಒಂದು-ಮಾನಸಿಕ ಸಮತೆ, ಎರಡು-ಅವಿರತ ಪ್ರಯತ್ನ, ಮೂರು-ಪ್ರಯತ್ನಗಳ ಫಲಿತಾಂಶ ಈ ಮೂರು ಅವಶ್ಯಕತೆಗಳು ಪೂರ್ಣಗೊಂಡಾಗ ಬ್ರಹ್ಮಜ್ಞಾನದ ಲಾಭ.

*ಯೋಗಿಯಾಗಿ ಸಂಭೋಗ ಮಾಡಿ ನೀ*
*ರೋಗವಳಿದು ನಿಜರಾಗದಿ ಹೊಳೆದರೆ, ಇದೇ...........*

ಇಲ್ಲಿ ಯೋಗಿ, ಭೋಗಿ, ರೋಗಿ ಮತ್ತು ರಾಗೀ, ಎಂಬ ನಾಲ್ಕು ತರಹದ ಅಧ್ಯಾತ್ಮಸಾಧಕರನ್ನು ತಿಳಿಸಿದ್ದಾರೆ. ಆತ್ಮಜ್ಞಾನಕ್ಕೆ ಯೋಗಮಾರ್ಗವನ್ನು ಅನುಸರಿಸಿದವ ಯೋಗಿ. ದುಃಖಿತಸಮಾಜದ ದೈಹಿಕಮಾನಸಿಕತೊಂದರೆಗಳನ್ನು ಸರಿಪಡಿಸುವವ ರೋಗಿ. ಲೌಕಿಕಸುಖದ ನಡುವೆ ದೈವಭಕ್ತಿಯನ್ನು ಬಿಡದೆ ನಡೆಸುವವ ಭೋಗಿ. ರಾಗಿ ಎಂದು ಶರೀಫರು ಹೇಳುವ ವಿಚಾರ ಹೊಸಬಗೆಯದ್ದು. ಇದು ಹಾಡಿಗೋ ವಾದ್ಯಕ್ಕೋ ಸಂಬಂಧಿಸಿದ ರಾಗವಲ್ಲ. ಬದಲಾಗಿ, ಅತ್ಮಾನುಭವದಲ್ಲಿ ತಿಳಿಯುವ

ಅಂತರ್ನಾದ ಒಟ್ಟಾರೆ ಹೇಳುವುದಿದ್ದರೆ, ಯೋಗವ ಸಿದ್ಧಿಸಿಕೊಂಡು, ಐಹಿಕಸುಖಗಳನ್ನು ತ್ಯಜಿಸಿ, ದೇಹ-ಮನಸ್ಸುಗಳ ದೋಷದೌರ್ಬಲ್ಯಗಳನ್ನು ದೂರಮಾಡಿ ನಿಜ ಅಂದರೆ ತನ್ನ, ಆತ್ಮದ ನಾದವನ್ನು, ರಾಗವನ್ನು, ಸಂಗೀತವನ್ನು ಕೇಳಲು ಸಾಧ್ಯವಾದರೆ, ಇದೇ ಬ್ರಹ್ಮಜ್ಞಾನ.

ಜ್ಞಾನವು ಅನುಭವವಾದಾಗ ಅದು ನಿಜವಾದ್ದು, ಭ್ರಾಂತಿಯಲ್ಲ ಎಂದು ಸ್ಪಷ್ಟಪಡಿಸಲು ಈ ಪದವನ್ನು ಶರೀಫರು ಹೇಳಿದ್ದಾರೆ. ಏಕೆಂದರೆ, ಶಬ್ದರೂಪದಲ್ಲಿ ಪ್ರಕಟವಾಗುವ ವಿದ್ಯೆಗಳು ತಿಳಿದರೆ ಅದು ಬ್ರಹ್ಮಜ್ಞಾನವಾಗದು. ತಿಳಿದುಕೊಂಡ ಸಾಧನೆಯ ಕ್ರಮ, ಸಂಪಾದಿಸಿದ ಸಿದ್ಧಿಗಳು, ಸಂಪತ್ತುಗಳು, ಇವೆಲ್ಲ ನಿರುಪಯೋಗಿ. ಈ ಅಭಿಪ್ರಾಯದ ಪದವೊಂದಿದೆ.

*ಓದು ಅಕ್ಷರ ವೇದ ಶಾಸ್ತ್ರದ ಸೊಲ್ಲಾ*
*ಸಾಧನ ವಿದ್ಯ ಸಕಲೈಶ್ವರ್ಯ ಸಂಪದ ಗಾದಿಮಾತುಗಳೆಲ್ಲ*
*ಪಾದದಲಿ ಮೆಟ್ಟೆಂದು ಹೇಳಿದನಲ್ಲಾ (೫೭)*

ವಿವೇಕಚೂಡಾಮಣಿಯಲ್ಲಿ[9] ಇದಕ್ಕೆ ಸಂವಾದಿಯಾದ ಮುನ್ನುಡಿ ಇದೆ. ವೇದಶಾಸ್ತ್ರಗಳೆಲ್ಲ ಶಬ್ದಜಾಲ. ಚಿತ್ತಭ್ರಮಣಕ್ಕೆ ಕಾರಣವಾದ ಮಹಾರಣ್ಯ. ಹಾಗಾಗಿ ತತ್ತ್ವ ತಿಳಿದ ಗುರುವಿನಿಂದಲೇ ಉಪದೇಶ ಪಡೆಯಬೇಕು. ಲೋಕದ ವಾಸನೆ, ಶಾಸ್ತ್ರವಾಸನೆ ಹಾಗೂ ದೇಹವಾಸನೆಗಳಿಂದ [ವಾಸನೆ ಅಂದರೆಪ್ರಜ್ಞೆ] ಯಥಾವತ್ತಾದ ಜ್ಞಾನ ದೊರೆಯಲಾರದು.

'ಬೋಧಿಸಿ ನಾದಬಿಂದು ಕಲಾ ತತ್ತ್ವದ ಹಾದಿ ತೋರಿಸಬಲ್ಲಾ' ನಾದಬಿಂದು ಕಲೆಗಳನ್ನು ತಿಳಿಯಪಡಿಸಿ ತತ್ತ್ವಮಾರ್ಗದ ದರ್ಶನ ಮಾಡಿಸುವ ಗುರುವಿನಿಂದ ಮಾತ್ರ ಬ್ರಹ್ಮಜ್ಞಾನ ಲಾಭವಾಗುತ್ತದೆ. ನಾದ, ಬಿಂದು, ಕಲೆಗಳೆಂದರೆ ಹಠಯೋಗದ ನಾಲ್ಕನೆಯ ಹಂತ. ಇದು ಸಮಾಧಿಯ ಪೂರ್ವಸ್ಥಿತಿ ಮತ್ತು ನಾದಾನುಸಂಧಾನದ ಹಂತ. **ನಾದ**ವೆಂದರೆ ಪ್ರಬೋಧಿತವಾದ ಅಂತರ್ನಾದ. **ಬಿಂದು**ವೆಂದರೆ ಪ್ರಭಾವಿತವಾದ ಅಂತಃಪ್ರಕಾಶ. **ಕಲೆ**ಯೆಂದರೆ ಶರೀರದಲ್ಲಿ ಸ್ಫುರಿಸುವ ದಿವ್ಯಶಕ್ತಿ.

*ಅದು ನೋಡು ಅದು ನೋಡು*
*ಬ್ರಹ್ಮಾನಂದದಿ ಮುಣಿಮುಣಿಗ್ಯಾಡ್ತುದು ನೋಡು।*
*ಸುತ್ತಲೆ ವ್ಯಾಪಿಸಿಕೊಂಡುದ ನೋಡು*
*ಅತ್ತಲೆಷ್ಟು ದಶಕಾಂಗುಲಿ ನೋಡು।(೫೯)*

ಇಲ್ಲಿ '**ಅದು**' ಅಂದರೆ ಆತ್ಮನು ಸ್ವ ಸ್ವರೂಪದಲ್ಲಿ ನೆಲೆಯಾದಾಗ ಇರುವ ಬಗೆಯನ್ನು ವಿವರಿಸಿದೆ. ದೇಹದ ಮಿತಿಯನ್ನು ದಾಟಿ ಮುಕ್ತವಾದಾಗ ಆತ್ಮನು ಪಡುವ ಆನಂದಮಗ್ನಸ್ಥಿತಿಯನ್ನು ಮತ್ತು ಸಂಕುಚಿತ ಅವಸ್ಥೆಯನ್ನು ಮೀರಿ ಎಲ್ಲಕಡೆ ವ್ಯಾಪಿಸಿ, ಮತ್ತೆ ಹತ್ತು ಅಂಗುಲ ಹೆಚ್ಚಿ ನಿಲ್ಲುತ್ತದೆ. ಈ ಮಾತು ಕಂಡಾಗ ಪುರುಷಸೂಕ್ತದ ಮಂತ್ರ ಸ್ಮರಣೆಗೆ ಬರುತ್ತದೆ.

*ಸ ಭೂಮಿಂ ವಿಶ್ವತೋ ವೃತ್ವಾ್ತ್ಯತಿಷ್ಠದ್ದಶಾಂಗುಲಮ್ ।*
(ಅವನು ಭೂಮಿಯನ್ನು ಎಲ್ಲಕಡೆ ಆವರಿಸಿ ಹತ್ತಂಗುಲ ಹೆಚ್ಚಾಗಿ ನಿಂತ.)

*ಅರಿವಿನ ಜಾಲದಿ ತೊಡಕೆದ ನೋಡು*
*ಗುರುವಿನ ಕೀಲ ಹಾಕಿದ ನೋಡು।*

ಎಂಬಲ್ಲಿ ಅರಿವೆಂಬ ಬಲೆಗೆ ಗುರುವೆಂಬ ಉಪಕರಣದಿಂದ ಸಿಕ್ಕಿದ ಆತ್ಮವನ್ನು ತಿಳಿಸಿದ್ದಾರೆ.

*ನೋಡೆನೆಂದರೆ ಕಾಣಿಸುವದಿಲ್ಲ*
*ನೋಡಿದರಾಕ್ಷಣ ಬಿಡುವುದಿಲ್ಲ।*
*ಹರಿಯು ಅಲ್ಲ ಹರನೂ ಅಲ್ಲ......।*

ಹೀಗೆ ಹೇಳುತ್ತಾ ಶರೀಫರು ಆತ್ಮವು ದೃಶ್ಯವಲ್ಲ. ಆದರೆ ಅನುಭವದ ಕಣ್ಣಿಗೆ ಕಂಡರೆ ಆಮೇಲೆ ಅದೃಶ್ಯವಾಗುವುದೂ ಇಲ್ಲ ಎಂದಿದ್ದಾರೆ. ಅಂದರೆ, ಒಮ್ಮೆ ಆತ್ಮದರ್ಶನವಾದರೆ ಮತ್ತೆ ಅದು ಮರೆಯಾಗದು. ಮರೆತುಹೋಗದು. ಆ ಪರಮ ಆತ್ಮಸ್ವರೂಪವು ಹರಿಯೆಂದು ಹರನೆಂದು ಗುರುತಿಸಿ ಕರೆಯಲು ಸಾಧ್ಯವಾಗದ ನೀರೂಪ, ನಿರಾಕಾರ ವಸ್ತು.

*ಆನಂದ ಚಿದ್ಘನವಸ್ತುವ ಕಂಡೆ*
*ಭಾನುಮಿಲ್ಲದ ಬಿಸಲೇನಮ್ಮ ।(೬೪)*

ಈ ಪದದಲ್ಲಿಯೂ ಆತ್ಮವು ಆನಂದಮಯ, ಚಿತ್ ಎಂದರೆ ಚೈತನ್ಯ ಸ್ವರೂಪಿ ಎಂದಿದೆ. ಮಾತ್ರವಲ್ಲ, ಸೂರ್ಯನಿಲ್ಲದೆಯೇ ಪ್ರಕಾಶಮಯವಾದ ಸ್ವರೂಪ ಎಂದು ವಿವರಿಸಲಾಗಿದೆ.

**೭.೨. ತತ್ತ್ವಜ್ಞಾನಿಗಳ ಸ್ವರೂಪ ವಿವರಣೆ:**

*ಸಾಧು ನೋಡಲೋ ಇವನು ಸಾಧು ನೋಡಲೋ*
*ಬೋಧಾನಂದದಿ ಮೆರೆವ ಮಹಾತ್ಮನು ।*
*ವೇದಾತೀತ ನಾದಾತೀತ*
*ವಾದಾತೀತ ಬ್ರಹ್ಮ ನೀತ।*

*ಎಂಟು ಗುಣಗಳ ತುಳಿದು ಕುಂಟನಾದನೋ*
*ಸುಂಟರಗಾಳಿಗೆ ಸಿಗದ ಲೋಕದ*
*ಕಂಟಕದೊಳಗೆ ಕಾಲನಿಡದ, ಸಾಧು . . . . . ।*
*ಆಸೆ ಅಳಿದನು ಕರ್ಮ ಪಾಶ ಕಳೆದನು . . .। (೭೯)*

ಬೋಧ ಪಡೆದು ಆನಂದದಿಂದ ಇರುವ ಮಹಾತ್ಮನೇ ನಿಜವಾದ ಸಾಧು. ವೇದಕ್ಕೂ ನಾದಕ್ಕೂ, ವಾದಕ್ಕೂ ಎಟಕದ, ಸಿಲುಕದ ಬ್ರಹ್ಮನೇ ಇವನು. ಅಷ್ಟಮದಗಳನ್ನು ತುಳಿದು ಸುಖ–ದು:ಖಗಳೆಂಬ ಬಿರುಗಾಳಿಗೆ ಸಿಕ್ಕದೆ ಲೋಕದ ವ್ಯವಹಾರವೆಂಬ ಮುಳ್ಳಿನ ಮೇಲೆ ಕಾಲೂರದ

ಮಹಾಪುರುಷನೇ ಸಾಧು. ಆಸೆಯನ್ನು ಅಳಿಸಿ, ಹೊಸ ಕರ್ಮಗಳಿಂದ ತಪ್ಪಿಸಿಕೊಂಡ ತನ್ನ ತಿಳುವಳಿಕೆಯಿಂದ ಪೂರ್ವದ ಕರ್ಮದ ಬಂಧವನ್ನು ಕಳಚಿಕೊಂಡವನೇ ನಿಜವಾದ ಸಾಧು.

*ಭೇದವನಳಿದಾತ್ಮ ಬೋಧನ ತಿಳಿಯುತ*
*ಕ್ರೋಧಾದಿಗಳ ಸುಟ್ಟು ಮೋದದಿಂದಿರುವಂಥ*
*ಸಾಧುರಿಗೊಂದಿಸುವೆ ನಿತ್ಯದಿ. . .. । (೮೦)*

ಸಮಸ್ತಭೇದಗಳನ್ನು ತೊಡೆದುಹಾಕಿ ಕ್ರೋಧವೇ ಮುಂತಾದ ದುರ್ಗುಣಗಳನ್ನು ಸುಟ್ಟು ಹಾಕಿ, ಆತ್ಮಬೋಧನೆಯನ್ನು ಪಡೆದು ಆನಂದವಾಗಿರುವ ಸಾಧುಗಳಿಗೆ ನಿತ್ಯ ವಂದಿಸುವೆ ಎನ್ನುತ್ತಾ ಜ್ಞಾನಿಗಳ ಬಗ್ಗೆ ತಮ್ಮ ಗೌರವವನ್ನು ಶರೀಫರು ಸೂಚಿಸುತ್ತಾರೆ. ಶಿವಯೋಗಿಯ ವರ್ಣನೆಯನ್ನು ಈ ಮುಂದಿನ ಪದದಲ್ಲಿ ಸರಳವಾಗಿ ಮಾಡಿದ್ದಾರೆ. ಸ್ಪಷ್ಟಾರ್ಥವನ್ನು ಸೂಚಿಸುವಂತೆ ಇದು ನಿರೂಪಿತವಾಗಿದೆ.

*ಸಂಸಾರದಿಂದ ಸದ್ಗತಿ ಹೊಂದಿ*
*ಹವಣವರಿತು ಮಾಯೆಯ ಜೈಸಿ*
*ಮರಣಗೆಲಿದವನೇ ಶಿವಯೋಗಿ*

*ಭವಭಾರ ಜಾಯಕರ್ಮಗಳನು ಬ್ಯಾರೆ*
*ಬಯಲು ಬ್ರಹ್ಮದಿ ಬೆರೆತು*
*ಬ್ರಹ್ಮಜ್ಞಾನ ದೊರೆವ ತನಕ*
*ತ್ರಿಣಯನ ಆಶ್ರಯ ಹಿಡಿದು*

*ಆವುದನರಿಯದೆ ಮುನ್ನ*
*ಅನುವರಿತು ಸವಿಗರಿದು*
*ಸಕಲ ವಿಷಯಗಳನು ನಿರಾಕರಿಸಿ*
*ಜವನ ಕೈಯೊಳು ಸಿಗದೆ ನಡೆದವನೇ ಶಿವಯೋಗಿ॥ (೮೭)*

**೭.೩ ಅದ್ವೈತತತ್ತ್ವನಿರೂಪಣೆ:**

ವ್ಯಾವಹಾರಿಕದೃಷ್ಟಿಯಿಂದ ಜೀವಾತ್ಮಗಳು ಅನೇಕವಿದ್ದು ಪರಮಾತ್ಮನಿಂದ ಭಿನ್ನವಿರುವುವು. ನಾನಾವಿಧ ವಿಶ್ವವು ಅಸ್ತಿತ್ವದಲ್ಲಿ ಇರುವುದು. ಈಶ್ವರನು ಈ ಜಗತ್ತನ್ನು ನಿರ್ಮಿಸುವುದು. ಆದರೆ ಪಾರಮಾರ್ಥಿಕದೃಷ್ಟಿಯಿಂದ ಜೀವ – ಜಗತ್ತು–ಈಶ್ವರ ಇವೆಲ್ಲ ಕೇವಲ ಆಭಾಸಗಳು. ಇರುವುದು ಪರಮಾತ್ಮನೊಬ್ಬನೇ. ಜೀವ–ಜಗತ್ತು–ಈಶ್ವರ ಎಂಬ ತ್ರಿಪುಟಿಯು ಪರಮಾತ್ಮನಲ್ಲಿ ಲಯ ಹೊಂದುವುದು. ಎಲ್ಲ ಭೇದ, ಭಿನ್ನತೆಯ ಭಾವ ಮಾಯವಾಗಿ ಏಕರಸಮಯ ಆತ್ಮವೊಂದೇ ಪ್ರತೀತವಾಗುತ್ತದೆ. ಎಲ್ಲೆಡೆ ಆತ್ಮವನ್ನೇ ಕಾಣುವವನಿಗೆ ಭೇದವೆಂಬುದು ಉಳಿಯುವುದಿಲ್ಲ. ಲೋಕದಲ್ಲಿ ತೋರಿಕೆಗೆ ಪ್ರತ್ಯೇಕವಾಗಿರುವ ಜೀವನು ಪರಮಾರ್ಥತ: ಬ್ರಹ್ಮವೇ.

ಶರೀಫರು ಅದ್ವೈತಿಯಾದ ಗೋವಿಂದಭಟ್ಟರ ಆಪ್ತಶಿಷ್ಯನಾದ್ದರಿಂದ ಮತ್ತು ಭಕ್ತಿ, ಯೋಗಗಳ ಮೆಟ್ಟಲನ್ನೇರಿ ಆತ್ಮಾನುಭವವನ್ನು ಸಾಕ್ಷಾತ್ಕರಿಸಿಕೊಂಡ ಅನುಭಾವಿಯಾದ್ದರಿಂದ ಅವರು ಅದ್ವೈತ ತತ್ತ್ವವನ್ನೇ ಪ್ರತಿಪಾದಿಸಿದ್ದಾರೆ. ಆತ್ಮ-ಪರಮಾತ್ಮಗಳು ಒಂದೇ ಎನ್ನುತ್ತಾರೆ.

*ಹೌದಪ್ಪ ಹೌದೋ ನೀನೇ ದೇವರಾ*
*ನಿಂದ ನೀ ತಿಳಿದರ ನಿನಗಿಲ್ಲೋ ದೂರ ।*
*ನೀರಿಲ್ಲದ ಜಳಕ ಮಾಡಿರಬೇಕೋ ।*
*ಅರಿವೆಯಿಲ್ಲದ ಮಡಿಯ ಉಟ್ಟಿರಬೇಕೋ।*
*ಊಟವಿಲ್ಲದೆ ಹೊಟ್ಟೆ ತುಂಬಿರಬೇಕೋ*
*ನಿದ್ದೆಯೊಳಗೆ ಸದಾ ಎಚ್ಚರವಿರಬೇಕೋ ।(೨೨)*

ಈ ಪದ್ಯದಲ್ಲಿ ದೇಹದ ಅವಶ್ಯಕತೆಗಳಾದ ಸ್ನಾನ, ವಸ್ತ್ರ, ಊಟ, ನಿದ್ದೆ ಇವೆಲ್ಲ ಪರಮಾತ್ಮ ಭಾವದಲ್ಲಿ ಅವಶ್ಯಕವಾಗುವುದಿಲ್ಲ. ಎಲ್ಲವೂ ತಾನೇ ಆಗಿರುವಾಗ ಮಾಡುವುದು, ಮಾಡಿಸಿಕೊಳ್ಳುವುದು ಎರಡೂ ಇಲ್ಲವಾಗುತ್ತದೆ. ತಂತ್ರ ಶಾಸ್ತ್ರದಲ್ಲಿ ಉಕ್ತವಾದ 'ಪರಾಪೂಜಾ' ಎಂಬ ಪರಿಕಲ್ಪನೆಯಲ್ಲಿ ನಿತ್ಯಶುದ್ಧವಾದ. ವಿಶ್ವವ್ಯಾಪ್ತನಾದ, ನಿತ್ಯತೃಪ್ತನಾದ ಸದಾ ಚೈತನ್ಯ ರೂಪಿಯಾದ ಪರಮಾತ್ಮನಿಗೆ ಸ್ನಾನಾದಿಗಳ ಅಗತ್ಯ ಬೀಳುವುದಿಲ್ಲ ಎಂದಿದೆ.

ನಿರ್ವಿಶೇಷವಾದ ಅಂದರೆ ನಿರ್ಗುಣ-ನಿರಾಕಾರವಾದ ಬ್ರಹ್ಮ ವಸ್ತುವನ್ನು ವಿವರಿಸುವುದು ಅಸಾಧ್ಯವಾದ ವಿಚಾರ. ಯಾವ ಲಕ್ಷಣವನ್ನು, ಸ್ವರೂಪವನ್ನು ಹೇಳಿದರೂ ಅದು ಸವಿಶೇಷ ವಾಗುತ್ತದೆ. ಅಚಿಂತ್ಯವೂ, ಲಕ್ಷಣವಿಲ್ಲದುದೂ, ಅವ್ಯವಹಾರ್ಯವೂ, ಗ್ರಹಿಸಲಾಗದುದೂ ಆದ ಈ ಬ್ರಹ್ಮವನ್ನು ಬೃಹದಾರಣ್ಯಕ, ಕಠ, ಮುಂಡಕ ಮುಂತಾದ ಉಪನಿಷತ್ತುಗಳಲ್ಲಿ **ನೇತಿ** ಎಂಬುದಾಗಿ ತಿಳಿಸಲು ಪ್ರಯತ್ನಿಸಿವೆ. ದೊಡ್ಡದಲ್ಲ, ಚಿಕ್ಕದಲ್ಲ, ಕಿರಿದಲ್ಲ, ಹಿರಿದಲ್ಲ, ಬೆಳಗುವುದಲ್ಲ, ಮಸುಕಲ್ಲ, ಕಪ್ಪಲ್ಲ, ರಸಗಂಧಗಳಿಲ್ಲ, ಕಣ್ಣು-ಕಿವಿಗಳಿಲ್ಲ, ಮಾತು -ಮನಗಳಿಲ್ಲ, ಪ್ರಾಣವಿಲ್ಲ, ಬಾಹ್ಯವಲ್ಲ, ಆಂತರವಲ್ಲ.

ಶಂಕರಾಚಾರ್ಯವಿರಚಿತ ನಿರ್ವಾಣ ದಶಕದಲ್ಲಿ ಆತ್ಮದ ನಿರ್ವಾಣ ಸ್ಥಿತಿಯನ್ನು ಸೂಚಿಸುತ್ತಾ ಜಗತ್ತಿನಲ್ಲಿ ತೋರುವ ಯಾವುದು ನಾನಲ್ಲ. ಏಕೈಕನಾದ, ಕೇವಲನಾದ ಶಿವನೇ ನಾನು ಎಂಬ ನಿರೂಪಣೆಯಿದೆ. ಅದನ್ನು ಹೋಲುವ ಶರೀಫರ ಪದ ಸುಂದರವಾಗಿ ವಿರಚಿತವಾಗಿದೆ.

*ನಾ ನಾ ಎಂಬುದು ನಾನಲ್ಲಾ ಈ*
*ಮಾನುಷ ಜನ್ಮವು ನಾನಲ್ಲಾ।*
*ನಾರಾಯಣ ಪರಬ್ರಹ್ಮ ಸದಾಶಿವ*
*ನೀ ಎನಿಸುವ ಗುಣ ನಾನಲ್ಲಾ।*
*ನರದೇಹವಿದು ನಾನಲ್ಲಾ*

*ಜರೆಮರಣಾದಿಯು ನಾನಲ್ಲಾ*
*ವರ ವೈಭವ ಸಂಸಾರದ ಸವಿಸುಖ*
*ಮರೆವ ನಾಯಕನು ನಾನಲ್ಲಾ।*
*ಮಾತಾ ಪಿತ ಸುತ ನಾನಲ್ಲಾ ಭೂ –*
*ನಾಥಾನಾದವ ನಾನಲ್ಲ*
*ಜಾತಿ ಗೋತ್ರಗಳು ನಾನಲ್ಲಾ ಬಹು*
*ಪ್ರೀತಿಯ ಸತಿ ಸುತ ನಾನಲ್ಲಾ।*
*ವೇದ ಓದುಗಳು ನಾನಲ್ಲಾ ಒಣ*
*ವಾದ ಮಾಡಿದವ ನಾನಲ್ಲಾ*
*ನಾದ ಬಿಂದು ಕಳೆ ಭೇದ ವಸ್ತು ನಿಜ–*
*ಬೋಧದಲ್ಲಿದ್ದವ ನಾನಲ್ಲಾ।*
*ನಾನಾ ರೂಪವು ನಾನಲ್ಲಾ, ನಾ*
*ಶಿಶುನಾಳಧೀಶನ ಬಿಡಲಿಲ್ಲಾ*
*ನಾ ಅಳಿಯದೆ ನಾ ತಿಳಿಯಲಾರದು*
*ನೀ ಎಣಿಸುವ ಗುಣ ನಾನಲ್ಲಾ ।(೨೩೧)*

ತಾತ್ಪರ್ಯರೂಪದಲ್ಲಿ ಹೇಳುವುದಿದ್ದರೆ, ಜನಿಸಿದ ಮನುಷ್ಯ 'ನಾನು' ಎಂದು ಭಾವಿಸುವ ಪ್ರತಿಯೊಂದು ಸನ್ನಿವೇಶ ನಿಜವಾದ ನಾನಲ್ಲ. ಅವೆಲ್ಲವನ್ನೂ ಹೊರತು ಪಡಿಸಿದ ಮತ್ತು ಮೀರಿದ, ವಿಲಕ್ಷಣವಾದ ಇತಿ–ಮಿತಿಗಳಿಲ್ಲದ ಒಂದೇ ಆಗಿರುವ ವಸ್ತುವೇ ನಾನು ಎಂದು ಕಲ್ಪಿಸಿಕೊಳ್ಳಬೇಕಾಗುತ್ತದೆ. ಈ ಏಕಮೇವಾದ್ವಿತೀಯ ಬ್ರಹ್ಮಭಾವ ಬರುವ ಮೊದಲು ನಾನು, ನೀನು, ಅವನು ಮುಂತಾದ ಅಸಂಖ್ಯ ಭೇದಗಳು, ಜೀವ –ದೇವ, ಸಾಂತ – ಅನಂತ ಮುಂತಾದ ಭಿನ್ನತೆಗಳು. ಸ್ವಭಾವದಿಂದ ಎಲ್ಲವೂ ತಾನೇ ಆಗಿರುವ ಆತ್ಮ, ಅಜ್ಞಾನ–ಅವಿದ್ಯೆಗಳಿಂದ ತನ್ನನ್ನು ತಾನೇ ಮಿತವೆಂದು ತಿಳಿಯುತ್ತದೆ. ಆಗ ದುಃಖದ ಅನುಭೂತಿ, ತನ್ನ ಯಥಾರ್ಥ ರೂಪವನ್ನು ತಿಳಿಯಬೇಕು, ತಳೆಯಬೇಕು ಎಂಬ ಹಂಬಲ ಜೀವನನ್ನು ಬಹುವಾಗಿ ಕಾಡುತ್ತದೆ. ಆ ವೇದನೆಯನ್ನು ಈ ಕೆಳಗಿನ ಪದ ತಿಳಿಸುತ್ತದೆ.

*ನಾನಾ ವಿದ್ಯೆಗಳೆಲ್ಲಾ ಕಲಿಯುದೇನರಿದಲ್ಲಾ*
*ನಾ ಸತ್ತು ನೀನಾಗುವದಿನ್ನೆಂದಿಗೆ ?*
*ನಾ ಬಂದು ನಾ ನಿಂದು ನಾನೇನು ಮಾಡಿದ್ದೆ*
*ನಾ ಸುಳ್ಳು ನೀನಾಗುವುದಿನ್ನೆಂದಿಗೆ ?*

*ನಾ ಬ್ರಹ್ಮ ನಾ ವಿಷ್ಣು ನಾ ರುದ್ರನೆಂಬಂತೆ*
*ನಾನಾದ ಭಾವ ಅಳಿಸುವದಿನ್ನೆಂದಿಗೆ ?*
*ನಾ ಧರ್ಮ ನಾ ಕರ್ಮ ನಾ ಪಾಪ*
*ನಾ ರೂಪ ಅಳಿಸುವದಿನ್ನೆಂದಿಗೆ ?*
*ನಾ ಹುಟ್ಟಿ ನಾ ಬೊಟ್ಟಿ ನಾ ಯಟ್ಟಿ*
*ನಾ ಮುಟ್ಟು ಮುರಿಸುವದಿನ್ನೆಂದಿಗೆ ?*

*ನಾ ಬಿಟ್ಟು ನಾ ಸುಟ್ಟು ನಾ ಶಿಶುನಾಳಧೀಶನ*
*ನಾ ಹೋಗಿ ಹೊಂದುವದಿನ್ನೆಂದಿಗೆ ? (೨೨೭)*

ಆಕಾಶದಿಂದ ಬಿದ್ದ ಮಳೆಯ ನೀರು ಹನಿಯಾಗಿ, ತೊರೆಯಾಗಿ, ನದಿಯಾಗಿ ಭಿನ್ನ ರೂಪಗಳನ್ನೆಲ್ಲಾ ದಾಟಿ, ಸಮುದ್ರ ಸೇರಿದ ಮೇಲೆ ನಾಮರೂಪಗಳನ್ನು ಅಳಿಸಿಕೊಂಡು, ತಾನು ಸಮುದ್ರವೇ ಆಗುತ್ತದೆ. ಜೀವಾತ್ಮ ಎಂಬ ಭಾವದಲ್ಲಿರುವಾಗ ಹೆಸರು, ರೂಪ, ವಿದ್ಯೆ, ಧರ್ಮ, ಕರ್ಮ ಮುಂತಾದ ವಿಸ್ತಾರವಾದ ಚಟುವಟಿಕೆಗಳು ಇರುತ್ತವೆ. ಅದೆಲ್ಲವನ್ನೂ ಕಳಚಿಕೊಂಡು ನಾ ಎಂಬುದು ಸತ್ತು ನೀನು (ಪರಮಾತ್ಮ) ಆಗುವ ಕುರಿತು ಜೀವ–ನ ಅತ್ಯಂತ ಆಸೆಯನ್ನು ಈ ಪದ ತಿಳಿಸುತ್ತದೆ. ಇನ್ನೊಂದು ಪದದಲ್ಲಿ ನಾ ಸತ್ತು ನೀನಾಗುವದಿನ್ನೆಂದಿಗೆ ಎಂಬ ಚಿಂತನೆಯ ಮುಂದಿನ ಹಂತದಂತೆ, ನಾ ಸತ್ತು ನಾ ಮಾತ್ರ ಇರಬೇಕು ಎಂದಿದ್ದಾರೆ ಶರೀಫರು. ಮಿತವಾದ, ಸಾಂತವಾದ, ನಾನು ಹೋಗಿ, ಅಮಿತವಾದ, ಅನಂತವಾದ 'ನಾನು (ಅಹಂ ಬ್ರಹ್ಮಾಸ್ಮಿ) ಎಂಬ ಬೋಧ ಮೂಡಬೇಕು ಎಂದು ಆಶಿಸಿದ್ದಾರೆ. ಹೀಗೆ, **'ನೇಹ ನಾನಾಸ್ತಿ ಕಿಂಚನ', 'ಬ್ರಹ್ಮ ಸತ್ಯಂ ಜಗನ್ಮಿಥ್ಯಾ'** ಮುಂತಾದ ಔಪನಿಷದಿಕತತ್ತ್ವವನ್ನು ಅನುಭವಿಸಿ, ಲೋಕದ ಮುಂದೆ ತಿಳಿಸಿದ ಶರೀಫರು ಅನುಭಾವಿಗಳೇ ಸರಿ.

*ಕೋಡಗನ ಕೋಳಿ ನುಂಗಿತ್ತ*
*ನೋಡವ್ವ ತಂಗಿ*
*ಕೋಡಗನ ಕೋಳಿ ನುಂಗಿತ್ತ ।*
*ಆಡು ಆನೆಯ ನುಂಗಿ*
*ಗೋಡೆ ಸುಣ್ಣವ ನುಂಗಿ*
*ಆಡಲು ಬಂದ ಪಾತರದವಳ ಮದ್ದಲಿ ನುಂಗಿತ್ತ। ......*
---------------------
---------------------
*ಗುಡ್ಡ ಗವಿಯನ್ನು ನುಂಗಿ*
*ಗವಿಯ ಇರುವೆಯ ನುಂಗಿ*
*ಗೋವಿಂದ ಗುರುವಿನ ಪಾದ ನನ್ನನೆ ನುಂಗಿತ್ತಾ– ತಂಗಿ*
*ಕೋಡಗನ ಕೋಳಿ ನುಂಗಿತ್ತ। (೨೫೭)*

ಒಗಟಿನ ರೂಪದ ಹಾಡಿದು. ಅರ್ಥಹೀನವೋ ಎಂಬ ಭ್ರಮೆಯನ್ನು ಹುಟ್ಟಿಸುತ್ತದೆ. ಹಾಸ್ಯ ಮಾಡುವ ಹಾಡಿನಂತೆಯೂ ಇದೆ. ಆದರೆ 'ನಾನು' ಎಂಬ ಸೀಮಿತ ವ್ಯಾಪ್ತಿಯ ಜ್ಞಾನ, ಅನುಭವಗಳು ಸೂಕ್ಷ್ಮವೆಂದು ತೋರುವ ಆದರೆ ಬೃಹತ್ತಾಗಿರುವ ಬ್ರಹ್ಮಸ್ವರೂಪವನ್ನು ಅನುಭವಿಸಿದಾಗ 'ನಾನು' ಎಂಬುದು ಲೀನವಾಗುತ್ತದೆ. 'ನಾನು' ಎಂಬ ಪ್ರತ್ಯೇಕತೆ ಮರೆಯಾಗುತ್ತದೆ. ರಾಮಕೃಷ್ಣ ಪರಮಹಂಸರು ಹೇಳಿದ ಸಾಗರದ ಆಳ ತಿಳಿಯಲು ಹೊರಟ ಉಪ್ಪಿನ

ಗೊಂಬೆಯಂತೆ ಜೀವಾತ್ಮನ ಅವಸ್ಥೆ. ನೆರೂರಿನ (ತಮಿಳುನಾಡು) ಸದಾಶಿವ ಬ್ರಹ್ಮೇಂದ್ರರು, ಶೃಂಗೇರಿ ಪೀಠದ ಚಂದ್ರಶೇಖರಭಾರತೀಸ್ವಾಮಿಗಳು, ಕಾಖಂಡಕಿ ಮಹೀಪತಿರಾಯರಿಗೆ ಪ್ರೇರಣೆ ನೀಡಿದ ನಂಗಾಶಾಹ ಎಂಬ ಬೆತ್ತಲೆ ಫಕೀರ ಇವರು ಅವಧೂತಸ್ಥಿತಿಗೆ ಪ್ರತ್ಯಕ್ಷ ಉದಾಹರಣೆಗಳು. ಬಾಹ್ಯಪ್ರಜ್ಞೆ ಕಳೆದುಕೊಂಡು, ದೇಶಕಾಲಗಳ ಅರಿವು ನಷ್ಟವಾಗಿ, ದಿಗಂಬರರಾಗಿ, ಧ್ಯಾನದ ಬ್ರಾಹ್ಮಿ ಸ್ಥಿತಿಯಲ್ಲಿ ಇರುತ್ತಿದ್ದರು. ರಾಮಕೃಷ್ಣ ಪರಮಹಂಸರೂ ಕೂಡ ಜನರ ನಡುವೆಯೇ ಇದ್ದಂತೆಯೇ ಸಮಾಧಿಯನ್ನು ಹೊಂದುತ್ತಿದ್ದರು. ಹೊರ ಪ್ರಪಂಚದ ನೋಡುಗರಿಗೆ ಇವರ ಚೇಷ್ಟೆ, ಮಾತು ಎಲ್ಲವೂ ಉನ್ಮತ್ತಆಚರಣೆಯಂತೆ ತೋರುತ್ತಿತ್ತು. ಶರೀಫರ ಪದವೂ ಹಾಗೆಯೇ ಇದೆ. ಗೂಢಾರ್ಥಪರಿಶೀಲನೆಗೆ ಹೊರಟಾಗ ಪರಮಾನುಭವದಲ್ಲಿ ಜೀವನು ಲಯವಾಗಿ ಸ್ವತ್ವವನ್ನು ಕಳೆದುಕೊಳ್ಳುವ ಅದ್ವೈತಪ್ರಾಪ್ತಿಯ ವಿಧಾನವು ಪ್ರತಿಪಾದಿತವಾದುದು ಕಾಣಿಸುತ್ತವೆ. **ಕೋಡಗವು ಚಂಚಲತೆಯ ಸಂಕೇತವಾದರೆ, ಕೋಳಿಯು ಜ್ಞಾನೋದಯದ ಸಂಕೇತ.** ಚಂಚಲತೆಯನ್ನು ನಿಗ್ರಹಿಸಿದಾಗ ಸ್ಥಿರವಾದ ಜ್ಞಾನ ಉದಯಿಸುತ್ತದೆ. ಜ್ಞಾನವು ದೃಢವಾದ ಮೇಲೆ ಚಂಚಲತೆಯೆಂಬುದು ಮತ್ತೆ ಬರುವುದಿಲ್ಲ. ಹಾಗಾಗಿ, ಕೋಡಗನ ಕೋಳಿನುಂಗಿತ್ತಾ ಎಂಬುದು ಸಾರ್ಥಕ ವಾಕ್ಯ.

ಆಡು-ಆನೆ ಎಂದರೆ ಅಜ-ಗಜಗಳು. ಒಂದು ಸಣ್ಣದು. ಇನ್ನೊಂದು ದೊಡ್ಡದು. ದೊಡ್ಡ ದೇಹದಲ್ಲಿ ಅಣುರೂಪಿಯಾಗಿ, ಸೂಕ್ಷ್ಮಾತಿಸೂಕ್ಷ್ಮವಾಗಿ **'ಅಣೋರಣೀಯಾನ್'**ಎಂದು ಕರೆಸಿಕೊಂಡ ಆತ್ಮವು ಸಾಧನೆಯಿಂದ, ಜ್ಞಾನದಿಂದ ಅನುಭವಕ್ಕೆ ಬಂದಾಗ ಎಲ್ಲವನ್ನೂ ಒಳಗೊಂಡ **'ಮಹತೋ ಮಹೀಯಾನ್'** ಆಗುತ್ತದೆ. ಲೋಕದ ರೂಢಿಯ ಮಾತುಗಳಲ್ಲಿ ಕೂಡಾ ಓದಿನಲ್ಲಿ ಮುಳುಗಿದ, ಚಿಂತನೆಯಲ್ಲಿ ಮುಳುಗಿದ, ಮುಂತಾದ ಪದಪ್ರಯೋಗಗಳಿವೆ. ಹೀಗೆ ನೋಡುವಾಗ ಆಡು ಆನೆಯ ನುಂಗಿ, ಗೋಡೆ ಸುಣ್ಣವ ನುಂಗಿ, ಗುಡ್ಡ ಗವಿಯನು ನುಂಗಿ, ಗವಿಯು ಇರುವೆಯ ನುಂಗಿ, ಇವೆಲ್ಲ ಅನುಭವದ ಸತ್ಯವನ್ನು ವಿವರಿಸಲು ಹೊರಟ ಪ್ರಯತ್ನದಂತೆ ಕಾಣುತ್ತವೆ. ಗೋವಿಂದಗುರುವಿನ ಪಾದ ನನ್ನನೆ ನುಂಗಿತ್ತ ಎಂಬ ವಾಕ್ಯ ಆತ್ಮೋದ್ಧಾರದಲ್ಲಿ ಗುರುವಿನ ಮಹತ್ತಮವಾದ ಪಾತ್ರವನ್ನು, ಕರುಣಾವಿಶೇಷವನ್ನು ತಿಳಿಸುತ್ತದೆ. ಗೀತೆಯಲ್ಲಿ **ಯೋ ಯತ್ ಶ್ರದ್ಧಃ ಸ ಏವ ಸಃ** ಎಂಬ ಉಲ್ಲೇಖವಿದೆ. ಅಂದರೆ, ಯಾವನಿಗೆ ಯಾವ ತರದ ಶ್ರದ್ಧೆಯಿದೆಯೋ, ಅವನು ಅದೇ ಆಗುತ್ತಾನೆ. ತನ್ನೊಳಗಿನ ಆತ್ಮವನ್ನು ತಿಳಿಯಹೊರಟವನು ತಾನು ಎಂಬುದನ್ನು ಆತ್ಮದೊಳಗೆ ಕಳೆದುಕೊಂಡು ಬಿಡುವ, ಅದ್ಭುತಪರಿಣಾಮವನ್ನು ಈ ಪದ ನಿರೂಪಿಸುತ್ತದೆ. ಇಲ್ಲಿ ಸರ್ವಜ್ಞನ ಎರಡು ವಚನಗಳನ್ನು ನೆನೆಯಬಹುದು.

*ಆನೆ ಮುಕುರದೊಳಡಗಿ*
*ಭಾನು ಸರಸಿಯೊಳಡಗಿ*
*ನಾನೆನ್ನ ಗುರುವಿನೊಳಡಗಿ.........।*

ಇನ್ನೊಂದು,

*ತತ್ತ್ವವೆಂಬುದು ತನ್ನ ಹಿತ್ತಲ ಗಿಡ ನೋಡ,*
*ಮತ್ತೆಲ್ಲಿ ನೋಡಿ ಅರಸದೆ ತಾನಿರ್ದ*
*ಒತ್ತಿಲೆಯ ನೋಡ............।*

ಅದ್ವೈತದ ನೇರ ಪ್ರತಿಪಾದನೆಯ ಶರೀಫರ ಸರಳ ಪದವೊಂದು ಹೀಗಿದೆ.

*ಬೋಧ ಒಂದೇ ಬ್ರಹ್ಮ*
*ನಾದ ಒಂದೇ ।*
*ಸಾಧನೆ ಮಾಡುವ ಹಾದಿ ಒಂದೇ*
*ಆದಿ ಪದ ಒಂದೇ ।*
*ಬಿಂದು ಒಂದೇ ನಿಜಾ–*
*ನಂದ ಒಂದೇ ।*
*ತಂದೆ ಸದ್ಗುರು ಗೋವಿಂದಗ ಒಂದೇ*
*ಅಂದಿಗಿಂದಿಗೆ ಒಂದೇ ।*
*ದೋಷ ಒಂದೇ ನಿರ್–*
*ದೋಷ ಒಂದೇ*
*ಶಿಶುನಾಳಧೀಶನ ಭಾಷೆ ಒಂದೇ*
*ಭವ ನಾಶ ಒಂದೇ । (೫೨)*

**೭.೪ ಅವಧೂತ ಲಕ್ಷಣ :**

ಬ್ರಹ್ಮಚರ್ಯ ಮುಂತಾದ ನಾಲ್ಕು ಆಶ್ರಮಗಳ, ಬ್ರಾಹ್ಮಣ ಮುಂತಾದ ನಾಲ್ಕು ವರ್ಣಗಳ, ಶಿಸ್ತು, ಕಟ್ಟುಪಾಡುಗಳನ್ನು ಮೀರಿ ತನ್ನಲ್ಲಿ ತಾನು ನೆಲೆನಿಂತ ಯೋಗಿ ಅವಧೂತ ಎನಿಸುತ್ತಾನೆ. ಮನದೊಳಗೆ ನಿಶ್ಚಿತವಾದ ಭಾವವನ್ನು ಬಹಿರಂಗವಾಗಿ ವ್ಯಕ್ತಪಡಿಸುವುದು ಅನುಭಾವ ಎನಿಸುತ್ತದೆ. ಉಪನಿಷತ್ತಿನ ಋಷಿಗಳೆಲ್ಲ ಅಧ್ಯಾತ್ಮಮಾರ್ಗಿಗಳು. ಅವರು ತಿಳಿಸಿದ ತತ್ತ್ವಗಳಲ್ಲಿ, ಕುಲಗೋತ್ರಗಳ ಗೊಂದಲವಿಲ್ಲ. ಜಾತಿ ವರ್ಣಗಳ ವೈಷಮ್ಯವಿಲ್ಲ. ಭೇದಬುದ್ಧಿಯಿಲ್ಲ. ಭಿನ್ನಭಿನ್ನ ವಿಚಾರಗಳ ಸಂಘರ್ಷವಿಲ್ಲ. ಹಾಗಾಗಿ ಒಂದು ಬಗೆಯಲ್ಲಿ ಋಷಿಗಳು ಅನುಭಾವಿಗಳು ಮತ್ತು ಅವಧೂತರು ಕೂಡ. ಅವಧೂತಗೀತದಲ್ಲಿ ಗುರುಬಸವ ಕವಿ ಹೀಗೆಂದಿದ್ದಾನೆ.

*ನಾನಾ ವಿಧವವಧೂತನ ಚಿಹ್ನ*
*ಏನಂದರಿಯಲು ಬಾರದು ತನ್ನ*
*ಜ್ಞಾನೋತ್ತರ ವಿವರಣೆಯೊಳಭಿನ್ನ*
*ಸಾನಂದವೇ ತಾನಾಗಿಹ ಚೆನ್ನ.*

ಶರೀಫರು, ಬ್ರಹ್ಮಸಾಕ್ಷಾತ್ಕಾರದಿಂದ ದ್ವಂದ್ವಾತೀತ ಅವಸ್ಥೆಯನ್ನು ತಲುಪಿದ ಅವಧೂತರನ್ನು, ಜೀವನ್ಮುಕ್ತರನ್ನು ಹೀಗೆ ತಿಳಿಸಿದ್ದಾರೆ.

*ಸಾಧುಗಳ ಸಹಜ ಪಥವಿದು*
*ಆನಂದದಿಂದಿರುವದು ।*
*ಬೇಕು ಬ್ಯಾಡೆಯೆಂಬುದನೆಲ್ಲಾ*
*ಸಾಕು ಮಾಡಿ ವಿಷಯ ನೂಕಿ*
*ಲೋಕದೊಳು ಏಕವಾಗೆ*
*ಮೂಕರಂತೆ ಚರಿಸುತಿಹರು ।*
*ಎಲ್ಲೆ ಕುಳಿತರಲ್ಲೆ ದೃಷ್ಟಿ*
*ಎಲ್ಲೆ ನಿಂತರಲ್ಲೆ ಲಕ್ಷ*
*ಅಲ್ಲೆ ಇಲ್ಲೆಯೆಂಬೋದಳಿದು*
*ಎಲ್ಲ ತಾವೇ ಚರಿಸುತಿಹರು ।*
*ದೇಹ ಧರಿಸಿ*
*ದೇಹ ಭೋಗನೀಗಿ ನಿತ್ಯ*
*ನಿರ್ಮಲಾತ್ಮ ಶಿಶುನಾಳೇಶನ*
*ಬೆಳಕಿನೊಳು ಬೆಳಗುತಿಹರು ।(೮೫)*

ಎಲ್ಲ ಬಗೆಯ ಸನ್ನಿವೇಶಗಳಲ್ಲಿ ಅವಿಚಲರಾಗಿ ಆನಂದದಲ್ಲೆ ಜ್ಞಾನಿಯಾದವನು, ಅನುಭಾವಿಯಾದವನು ಇರುತ್ತಾನೆ. ಯಾವುದನ್ನೂ ಬೇಕೆಂದು ಆಸೆ ಪಡುವುದಿಲ್ಲ, ಬೇಡವೆಂದು ತಿರಸ್ಕರಿಸುವುದಿಲ್ಲ. ವಿಷಯಸಂಗವನ್ನು ತ್ಯಜಿಸಿ, ನಿರ್ಮಲವಾಗಿ ಇರುವನು. ಲೋಕದೊಡನೆ ಏಕೀಭವಿಸಿದ ಕಾರಣ ಆಡಲು ಮಾತಿಲ್ಲ, ನೋಡಲು ದೃಶ್ಯವಿಲ್ಲ, ಏನನ್ನು ಮಾಡಬೇಕು ಎಂಬ ಸಂಕಲ್ಪವೂ ಇಲ್ಲ. ಎಲ್ಲ ಭೇದವನ್ನು ಅಳಿಸಿಕೊಂಡು ಎಲ್ಲವೂ ತಾವೇ ಆಗಿ ಸಂಚರಿಸುತ್ತಾರೆ. ಭಗವದ್ಗೀತೆಯಲ್ಲಿ ಜ್ಞಾನಿಯ ಲಕ್ಷಣವನ್ನು ವಿವರಿಸುವಲ್ಲಿ, ಇದಕ್ಕೆ ಸದೃಶವಾದ ವರ್ಣನೆಯಿದೆ. ಯದೃಚ್ಛಾಲಾಭಸಂತುಷ್ಟ, ಗತಸಂಗ, ನಿತ್ಯತೃಪ್ತ, ನಿರಾಶೀ, ಕಾಮಸಂಕಲ್ಪವರ್ಜಿತ, ಮುಕ್ತ ಮುಂತಾಗಿ ವಿವರಿಸಿದೆ.

*****

ಟಿಪ್ಪಣಿ

1.Pathway to God –Page 174

೨. ವಿವೇಕ ಚೂಡಾಮಣಿ ಶ್ಲೋಕ ೬೨

# ಅಧ್ಯಾಯ – ೮

## ೮.೧ ಅಧ್ಯಾತ್ಮ – ಅನುಭಾವ

ಆಧ್ಯಾತ್ಮವೆಂದರೆ ಆತ್ಮವನ್ನು, ದೇಹವನ್ನು, ಬ್ರಹ್ಮವಸ್ತುವನ್ನು ಉದ್ದೇಶಿಸಿದ ಅಥವಾ ಸಂಬಂಧಿಸಿದ ವಿಚಾರ ಮಾರ್ಗ. ಇದನ್ನು ದರ್ಶನ ಶಾಸ್ತ್ರವೆಂದು ಕರೆಯುತ್ತಾರೆ. ಇದು ಸತ್ಯಾನ್ವೇಷಣೆ ಮತ್ತು ಜೀವನವಿಧಾನ ಕೂಡ. ಹೇಗೆ ಹೇಗೋ ಇರುವ ಜೀವನದ ಸಂಪೂರ್ಣಪರಿವರ್ತನೆ, ಮನಸ್ಸಿನ ನವೀಕರಣಗಳಿಂದ ಸತ್ಯದ ಬೆಳಕಿನೆಡೆ ಒಯ್ಯುತ್ತದೆ.

ಅನುಭಾವವೆಂಬುದು ಅಂತರಂಗದ ರತ್ನ, ಆತ್ಮವಿದ್ಯೆ, ನಿಜನಿವಾಸದಲ್ಲಿ ಇರಿಸುವುದು, ನೆಲದ ಮರೆಯ ನಿಧಾನದಂತೆ, ತಾನಾರೆಂದರಿಯುವುದು ಮುಂತಾದ ವಿವರಣೆಗಳನ್ನು ಶರಣರ ವಚನಗಳಲ್ಲಿ ಕಾಣಬಹುದು. ಇದು ಅಧ್ಯಾತ್ಮಕ್ಕಿಂತ ಭಿನ್ನವೇನೂ ಅಲ್ಲ. ವಿಚಾರದಿಂದ, ಸಾಧನೆಯಿಂದ ಪಡೆದ ಅನುಭವ, ಅದಕ್ಕೆ ಅನುಗುಣವಾದ ವರ್ತನೆ ಇವನ್ನು ಅನುಭಾವ ಎನ್ನಬಹುದು. ಅಧ್ಯಾತ್ಮವೆಂದರೆ ಇದು ಮತ್ತು ವೈದಿಕವಾದ, ಶಾಸ್ತ್ರೀಯವಾದ, ತತ್ತ್ವಜ್ಞಾನದ ಸಂಪಾದನೆ ಹಾಗೂ ಆತ್ಮ ದರ್ಶನವನ್ನು ಒಳಗೊಂಡಿದೆ. ಬುದ್ಧಿಶಕ್ತಿಯಿಂದ, ಪ್ರಯೋಗ–ಪರೀಕ್ಷೆಗಳಿಂದ, ಸತ್ಯದ ಪೂರ್ಣ ಸ್ವರೂಪ ಕಾಣಿಸದು. ವಿಶ್ವವ್ಯಾಪಿಯಾದ, ವಿಶ್ವಾತೀತವಾದ ಸತ್ಯ, ಬುದ್ಧಿ, ತರ್ಕಗಳಿಗೂ ಅತೀತ. ಅದನ್ನು ಕಾಣಲು ಅತೀತದೃಷ್ಟಿಯೇ ಬೇಕು. ಅಂದರೆ ಅಂತರ್ಮುಖದೃಷ್ಟಿ. ಆಗ ಹೃದಯದಲ್ಲಿ ಎಚ್ಚರಗೊಳ್ಳುವ ಭಾವದ ಅನುಸಂಧಾನವೇ ಅನುಭಾವ.[೧]

ಪರಮಾತ್ಮ –ಜೀವಾತ್ಮಗಳ ಸಂಬಂಧದಿಂದ ಉಂಟಾಗುವ ಅಮೃತತತ್ವ. ಇದು ಅನುಭವದ ತಳಹದಿ. ಜೀವ–ದೇವರ ಸಮರಸತೆಯಿಂದ ಅಮೃತತತ್ವ ಪಡೆಯುವ ನಿರಂತರಹಂಬಲವನ್ನು ಕೈಗೂಡಿಸುವ ಸಾಧನೆ ಅನುಭಾವಮಾರ್ಗ. ಆತ್ಮನ ಸಹಜಸ್ವರೂಪವಾದ ಆನಂದವನ್ನು ಒದಗಿಸಿ ಕೊಡುವುದು ಅನುಭಾವದ ಕೊನೆಯ ಹಂತ. ಬುದ್ಧಿ–ಮನಗಳಿಗೆ ಎಟುಕದ ಅಂತಃಸ್ಫುರಣದಿಂದ ಉಂಟಾಗುವ ಅನುಭೂತಿ. ಈ ಅವಸ್ಥೆ ಅವರ್ಣನೀಯ. ತೈತ್ತಿರೀಯ ಉಪನಿಷತ್ತಿನಲ್ಲಿ ಹೇಳಿರುವಂತೆ **–'ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ'** ಅಂದರೆ ಮಾತು – ಮನಗಳು ಅಲ್ಲಿ ವರೆಗೆ ಮುಟ್ಟದೆ ಹಿಂದಿರುತ್ತವೆ.

ಉಪನಿಷತ್ತುಗಳು ಅನುಭಾವದ ಮೊತ್ತಮೊದಲ ಗ್ರಂಥಗಳು. ಈಶೋಪನಿಷತ್ತಿನ ಈ ವಚನ ಅನುಭಾವಿಯ ದೃಷ್ಟಿಕೋನವನ್ನು ಸುಂದರವಾಗಿ ತಿಳಿಸುತ್ತದೆ. ಓ ಸೂರ್ಯನೇ, ಸತ್ಯವನ್ನು ಚಿನ್ನದ ಪಾತ್ರೆಯಿಂದ ಮುಚ್ಚಿಡಲಾಗಿದೆ. ಅದರ ದರ್ಶನಕ್ಕಾಗಿ ಅದನ್ನು ತೆಗೆದುಬಿಡು ಎಂದು ಋಷಿಗಳು ಬೇಡಿಕೊಂಡಿದ್ದಾರೆ. ಚಿನ್ನದ ಅರ್ಥಾತ್ ಆಕರ್ಷಕವಾದ ಮುಚ್ಚಳವನ್ನು ದೂರಮಾಡಿ ಸತ್ಯವನ್ನು

ಪ್ರತ್ಯಕ್ಷವಾಗಿ ದರ್ಶಿಸುವುದು ಅನುಭಾವ. ಕ್ರಾಂತದರ್ಶಿಗಳಾದ ಋಷಿಗಳು ಸತ್ಯಸಾಕ್ಷಾತ್ಕಾರದಿಂದ ಮಂತ್ರದ್ರಷ್ಟಾರರಾದರು. ಶ್ರುತಿಯಾಗಿ ಅಂದರೆ ಒಳಕಿವಿಯಾಗಿ ಪಡೆದ ತತ್ತ್ವಜ್ಞಾನವನ್ನು ಮುಂದಿನವರಿಗೆ ಉಪದೇಶಿಸಿ ಅನುಶ್ರುತಿಯನ್ನು ಸೃಷ್ಟಿಸಿದರು. (ಶ್ರುತಿ ಮತ್ತು ಅನುಶ್ರುತಿ ಎರಡು ವೇದದ ಪರ್ಯಾಯ ನಾಮಗಳು) ಜಗತ್ತಿಗೆ ಅಧ್ಯಾತ್ಮಜ್ಞಾನದ ಅಮೂಲ್ಯರತ್ನಭಂಡಾರವನ್ನು ನೀಡಿದರು. ತದನಂತರ ಉಪನಿಷತ್ತುಗಳ ಸಾರವೆನಿಸಿದ ಭಗವದ್ಗೀತೆ ಅನುಭಾವದೃಷ್ಟಿಯಿಂದ ಪ್ರಮುಖವಾದ ಕೃತಿ. ಜೀವನಹೋರಾಟದಲ್ಲಿ ಬಂಧನಕ್ಕೆ ಸಿಲುಕದೆ ಆತ್ಮಸಂತೋಷವನ್ನು, ಸ್ಥಿತ ಪ್ರಜ್ಞೆಯನ್ನು ಪಡೆಯಲು ಬೇಕಾದ ಯೋಗಸಮನ್ವಯದ ಮಾರ್ಗ ಗೀತೆಯಲ್ಲಿ ಪ್ರತಿಪಾದಿತವಾಗಿದೆ. ವಿಸ್ತಾರವಾಗಿ ಉಪದೇಶಿಸಿದರೂ ಕೃಷ್ಣ ಅರ್ಜುನನಿಗೆ ದಿವ್ಯದೃಷ್ಟಿಯನ್ನು ಕೊಟ್ಟು ತನ್ನ ವಿಶ್ವರೂಪದ ಪ್ರದರ್ಶನ ಮಾಡಿದ. ಅಂದರೆ ಸತ್ಯಸ್ವರೂಪದ ಪ್ರತ್ಯಕ್ಷಾನುಭವಕ್ಕೆ ಅಂತರ್‌ದೃಷ್ಟಿ ಅಗತ್ಯ. ಉಪನಿಷತ್ತುಗಳು ಮತ್ತು ಗೀತೆ ಹಾಕಿದ ಆದರ್ಶ ಶಾಖೋಪಶಾಖೆಗಳಾಗಿ ಬೆಳೆದು ಆಗಮ ಪುರಾಣಗಳಲ್ಲಿ, ಶಾಸ್ತ್ರಸಂಪ್ರದಾಯಗಳಲ್ಲಿ, ಪಂಥ- ಮತಗಳಲ್ಲಿ ಬೆಳೆಯುತ್ತಾ. ಹರಡುತ್ತಾ ಹೋಯಿತು. ಸಾಧಕನ ಮನೋಧರ್ಮ, ಸಂಸ್ಕಾರ, ಸಾಮರ್ಥ್ಯ, ಪೂರ್ವಸಿದ್ಧತೆಗಳಿಗೆ ಅನುಗುಣವಾಗಿ ಅನುಭಾವದ ಮಾರ್ಗ ಬೇರೆ ಬೇರೆಯಾಗಿರುತ್ತದೆ. ಆದರೂ ಅನುಭವ ಭಿನ್ನವಲ್ಲ. ವಿದೇಶೀಯ ಅನುಭಾವಿಗಳು, ಇಸ್ಲಾಂನ ಸೂಫಿಗಳು, ಹಿಂದೂ ಸಾಕ್ಷಾತ್ಕಾರವಾದಿಗಳು ಇವರೆಲ್ಲರ ಮಾರ್ಗ ಭಿನ್ನವಾಗಿದ್ದರೂ ಅನುಭವ ಒಂದೇ.[3]

ಶರೀಫರು ಅಧ್ಯಾತ್ಮಜ್ಞಾನದ ಪ್ರದರ್ಶನಕ್ಕೆ, ಅನುಭಾವಮಾರ್ಗದ ಉಪದೇಶಕ್ಕೆ ಹೊರಟವರಲ್ಲ. ವೈಯಕ್ತಿಕವಾದ ಜ್ಞಾನಪಿಪಾಸೆಯಿಂದ ಸದ್ಗುರುವಿನ ಸಹಾಯದಿಂದ ತಿಳುವಳಿಕೆಯನ್ನು ಅನುಭವವಾಗಿ ಪರಿವರ್ತಿಸಿಕೊಂಡವರು. ಬೆಳವಣಿಗೆಯ ಹಂತಗಳಲ್ಲಿ ತಮ್ಮಂತೆ ಸುತ್ತಲಿನ ಸಮಾಜ ಶ್ರೇಯೋಮಾರ್ಗವನ್ನು ಅನುಸರಿಸಲಿ ಎಂಬ ಅನುಕಂಪದೃಷ್ಟಿಯಿಂದ ತತ್ತ್ವಪದಗಳನ್ನು ರಚಿಸಿದರು. ಆಗ ಅದನ್ನು ಉಳಿಸಿಕೊಳ್ಳುವ ಪ್ರಯತ್ನಕ್ಕೂ ಇಳಿದವರಲ್ಲ. ಯಾವುದೇ ಪಂಥವನ್ನು, ಶಿಷ್ಯಪರಂಪರೆಯನ್ನು ಸ್ಥಾಪಿಸಿದವರಲ್ಲ. ಕುಲದ ಉದ್ಧಾರಕ್ಕೆ ಬೇಕಾಗಿ ಒಬ್ಬ ಸದಸ್ಯನನ್ನು ತ್ಯಜಿಸಬಹುದು, ಗ್ರಾಮದ ಒಳಿತಿಗೆ ಒಂದು ಕುಲವನ್ನು ಬಿಡಬಹುದು. ದೇಶದ ಹಿತಕ್ಕಾಗಿ ಒಂದು ಗ್ರಾಮವನ್ನೇ ತ್ಯಾಗ ಮಾಡಬಹುದು. ಆತ್ಮಕ್ಕೋಸ್ಕರವಾಗಿ ಸಕಲ ಭೂಮಂಡಲವನ್ನೇ ಬಿಡಬೇಕು ಎನ್ನುತ್ತಾರೆ. ಅದೇ ಬಗೆಯಲ್ಲಿ ಶರೀಫರು ಆತ್ಮಾನುಭವಕ್ಕಾಗಿ ಎಲ್ಲವನ್ನೂ ಬಿಟ್ಟು ಕೊಟ್ಟು ಶಿವಯೋಗಿಯಾದರು.

## ೪.೨ ಅಧ್ಯಯನ ಫಲಿತಾಂಶ

ಚಾರಿತ್ರಿಕ ದಾಖಲೆಗಳು ದೊರೆಯಲು ಸಾಧ್ಯವಾಗದಷ್ಟು ಪ್ರಾಚೀನಕಾಲದಿಂದ ಪ್ರಾರಂಭವಾದ ಭಾರತೀಯಆಧ್ಯಾತ್ಮಿಕಚಿಂತನಪ್ರವಾಹ ಸುದೀರ್ಘ ಕಾಲದಲ್ಲಿ ವಿಸ್ತಾರವಾಗಿ ಎಷ್ಟೋ ಮತ, ಪಂಥಗಳಾಗಿ ಒಡೆಯಿತು. ಅಸಂಖ್ಯಾತಸುಧಾರಣೆಗಳು, ನವಜಾಗೃತಿಗಳು, ಸಾಂದರ್ಭಿಕಪರಿವರ್ತನೆಗಳು, ಪರಸ್ಪರ ಆದಾನ-ಪ್ರದಾನಗಳು ನಡೆದವು. ಅವುಗಳನ್ನು ಪ್ರಮುಖವಾಗಿ ನಾಲ್ಕು ಅಂಶಗಳನ್ನಾಗಿ ಗುರುತಿಸಬಹುದು[೩].

*೧. ಆತ್ಮ ಪರಮಾತ್ಮನ ಅಸ್ತಿತ್ವ.*
*೨. ಅದರ ಸಾಕ್ಷಾತ್ ದರ್ಶನ- ಅನುಭವ ಪಡೆಯುವುದು.*
*೩. ಹಾಗೆ ಸಾಕ್ಷಾತ್ಕಾರ ಮಾಡಿಕೊಳ್ಳುವುದೇ ಮಾನವ ಜೀವನದ ಹೆಗ್ಗುರಿ.*
*೪. ಈ ಗುರಿಯನ್ನು ಹೊಂದಲು ಮಾರ್ಗಗಳು ಅನೇಕ ಇವೆ. ಅವೆಲ್ಲವೂ ಸತ್ಯ ಮಾರ್ಗಗಳೇ.*

ಅಧ್ಯಾತ್ಮದ-ಧರ್ಮದ ಮಾರ್ಗದಲ್ಲಿ ನಡೆಯುವಾಗ ಇತರರ ಕುರಿತಾಗಿ ಸಹಿಷ್ಣುತೆ, ಸಮನ್ವಯ, ಗೌರವ ಇವೆಲ್ಲ ಬೇಕೇ ಬೇಕು. ಆದರೆ ಈ ಎಲ್ಲ ಅಂಶಗಳು ಸಾಧನೆಯ ಹಾದಿಗೆ ಸಂಬಂಧಿಸಿದವು, ಗುರಿಗೆ ಅನ್ವಯಿಸಿದ್ದಲ್ಲ. ಗುರಿ ತಲುಪಿದಾಗ 'ಭೇದ' ಎಂಬುದೇ ಅಪ್ರಸ್ತುತ. ಆಚಾರ-ವಿಚಾರ ಭಿನ್ನತೆ ಅಳಿದು ಹೋಗುತ್ತದೆ. ಹಾಗಾದರೆ ತತ್ತ್ವಜ್ಞಾನಿಗಳಲ್ಲಿರುವ ತತ್ತ್ವ ಒಂದೇ ಆಗಿದ್ದರೆ, ಅವರು ಉಪದೇಶಿಸಿದ ಮಾರ್ಗಗಳಲ್ಲಿ ಏಕೆ ಇಷ್ಟೊಂದು ವೈವಿಧ್ಯ? ಎಂಬ ಪ್ರಶ್ನೆ ಎದುರಾಗುತ್ತದೆ. ವೈದಿಕಋಷಿಗಳಿಂದ ಇಂದಿನವರೆಗೆ ಪ್ರತಿಯೊಬ್ಬ ಅನುಭಾವಿ ಅದ್ವಯದ, ಪ್ರಜ್ಞಾತೀತಅವಸ್ಥೆಯಿಂದ ಹೊರಬಂದಾಗ ತಮ್ಮ ಅವರ್ಣನೀಯಅನುಭವಗಳನ್ನು, ಅನಿರ್ವಚನೀಯಜ್ಞಾನವನ್ನು ಜನಹಿತದ ಉದ್ದೇಶದಿಂದ ಪ್ರಕಟಿಸುತ್ತಾರೆ. ಕಾಣುವ, ಕೇಳುವ ಜನಸಮುದಾಯದ ಯೋಗ್ಯತೆ ಮತ್ತು ಅವಶ್ಯಕತೆಗೆ ತಕ್ಕಂತೆ ವಿವರಿಸುತ್ತಾರೆ. ಭಕ್ತನಿಗೆ-ಶಿಷ್ಯನಿಗೆ ಯಾವ ಬಗೆಯಲ್ಲಿ ತಿಳಿಹೇಳಲು ಸಾಧ್ಯವೋ, ಆ ಬಗೆಯಲ್ಲಿ ವ್ಯಕ್ತಪಡಿಸುತ್ತಾರೆ. ಅವರ ಮಾತುಗಳಲ್ಲಿ ನಿರ್ಗುಣ-ನಿರಾಕಾರ-ನಿರ್ವಿಶೇಷಗಳೆಂಬ ಪರಮಾತ್ಮನ ವಿವರಣೆಗಳೊಂದಿಗೆ, ತದ್ವಿರುದ್ಧವಾದ ಸಗುಣ -ಸಕಾರ -ಸವಿಶೇಷ ನಿರೂಪಣೆಗಳೂ ಇವೆ. ಏಕ-ಅನೇಕ ಎಂಬ ವಿರೋಧಗಳೂ ಇವೆ.

ಆದರೆ ಭಾರತದಲ್ಲಿ ಮತಗಳ-ನಂತರ ನಡುವೆ ತಿಕ್ಕಾಟ ನಡೆದುದೇ ಇಲ್ಲವೆನ್ನಬಹುದು. ರಾಜಕೀಯನೆಲೆಯಲ್ಲಿ ನಡೆದಿದ್ದರೂ ಆಧ್ಯಾತ್ಮಿಕನೆಲೆಯಲ್ಲಿ ಸಂಘರ್ಷ ಇಲ್ಲವೇ ಇಲ್ಲ. ಸಂತರಿಗೆ ಮತಪ್ರಚಾರಕ್ಕಿಂತ ಹೆಚ್ಚಾಗಿ ಸುಯೋಗ್ಯಜ್ಞಾನ ಹಾಗೂ ಸಾಕ್ಷಾತ್ಕಾರವೇ ಪ್ರಧಾನವಾಗಿತ್ತು. ಅದರ ಉದಾಹರಣೆ ಭಗವದ್ಗೀತೆ. ಅದರಲ್ಲಿ ಕೃಷ್ಣ ಅನೇಕ ಮತತತ್ತ್ವಗಳನ್ನು ಸಮನ್ವಯ ಮಾಡಿ

ಪ್ರತಿಪಾದನೆ ನಡೆಸಿದ್ದಾನೆ. ಕರ್ಮ–ಜ್ಞಾನ–ಭಕ್ತಿ ಮುಂತಾದ ಯೋಗಗಳನ್ನು ಹೇಳಿ, ಸಾಧಿಸುವ ಮಾರ್ಗವನ್ನು ಉಪದೇಶಿಸಿದ್ದಾನೆ. ಇದಾವುದೂ ಸಾಧ್ಯವಾಗದಿದ್ದರೆ, ದೇವರಲ್ಲಿ ಆತ್ಯಂತಿಕ ಶರಣಾಗತಿಯನ್ನು ಹೇಳಿದ್ದಾನೆ.'ಎಲ್ಲವನ್ನೂ ಬಿಟ್ಟು ನನ್ನನ್ನೇ ಶರಣಾಗು'ಎಂದಿದ್ದಾನೆ. ಯಾರು ಹೇಗೆ ನನ್ನನ್ನು ಆಶ್ರಯಿಸುತ್ತಾರೋ ಅವರನ್ನು ಹಾಗೆಯೇ ನಾನು ಅನುಗ್ರಹಿಸುತ್ತೇನೆ. ಯಾವ ಮಾರ್ಗದಲ್ಲಿ ಹೋದರೂ ಕೊನೆಗೆ ನನ್ನನ್ನೇ ಸೇರುತ್ತಾರೆ." ಎಂದು ಘೋಷಿಸಿದ್ದಾನೆ.

ವಿದೇಶಿಯ ಧಾರ್ಮಿಕವಿಚಾರಧಾರೆಗಳು ಭಾರತದಲ್ಲಿ ಹರಿದಾಗ ವಿರೋಧದ ನೆಲೆಗಿಂತ ಸಮನ್ವಯದ ನೆಲೆ ಬಲವಾಗಿ ಬೆಳೆಯಿತು. ಗುರುನಾನಕರ, ಕಬೀರರ, ಸೂಫಿಗಳ ಪರಂಪರೆ ತಿಳಿಸುವುದು ಇದನ್ನೇ. ಇಸ್ಲಾಂ ಮತ್ತು ಭಾರತ ದೇಶೀಯ ತತ್ತ್ವಜ್ಞಾನದ ಸಮನ್ವಯ–ಸಂಮಿಲನ. ಕರ್ನಾಟಕದಲ್ಲಿ ಶಿಶುನಾಳ ಶರೀಫರು ಉತ್ತಮದೃಷ್ಟಾಂತ ಇದಕ್ಕೆ. ಇಸ್ಲಾಂನ ಅನುಯಾಯಿಯಾಗಿ ಹುಟ್ಟಿ, ಅಲ್ಲಾ–ಮಹಮ್ಮದರ ಭಕ್ತಿಯೊಂದಿಗೆ, ಹಿಂದೂ ದೇವರುಗಳನ್ನು ಭಕ್ತಿ ಮಾಡಿದರು. ಮುಸ್ಲಿಂ ಆಚರಣೆಗಳ ಪದಗಳೊಂದಿಗೆ ದೇವ–ದೇವಿಯರ ಸ್ತುತಿಗಳನ್ನು ರಚಿಸಿದರು. ಹಿಂದೂ ಪುರಾಣಗಳ, ಶರಣರ ವಚನಗಳ ಸಂಪರ್ಕದಿಂದ ವಿಶಾಲ–ಉದಾರ ತಾತ್ತ್ವಿಕ ದೃಷ್ಟಿಯನ್ನು ಬೆಳೆಸಿಕೊಂಡರು. ವಿವಿಧ ಯೋಗಮಾರ್ಗಗಳಲ್ಲಿ ಸಾಧನೆ ನಡೆಸಿದರು. ಭಕ್ತಿಯೋಗ –ಪಾತಂಜಲ ಯೋಗ–ಕುಂಡಲಿನೀ ಯೋಗ ಇವೆಲ್ಲ ಸಾಧನೆಗಳಿಂದ ಶಿವಯೋಗದ ಫಲವನ್ನು ಪಡೆದು ಶಿವಯೋಗಿ ಎನಿಸಿದರು. ಮತ ಧರ್ಮಗಳ ಆಚಾರಗಳ ಜಟಿಲತೆಯಲ್ಲಿ, ವಿಚಾರಗಳ ತಾಕಲಾಟದಲ್ಲಿ ಸಿಕ್ಕಿಕೊಳ್ಳದೆ ತಮ್ಮ ಗುರಿ ಸಾಧಿಸಿದರು. ತತ್ತ್ವವಿಚಾರದ ಮೀಮಾಂಸೆ, ವಿವರಣೆಯ ರಾಶಿಯನ್ನು ನಿರ್ಮಿಸದೆ, ತತ್ತ್ವದ ಅನುಸಂಧಾನಕ್ಕೆ ಬೇಕಾದ ಆಚಾರ ಸಂಹಿತೆಯನ್ನೂ ನಿರೂಪಿಸಿದರು. ಬುದ್ಧಿಯ ಬಲ, ಶಾಸ್ತ್ರಪಾಂಡಿತ್ಯದ ದೃಢಪಂಚಾಂಗಗಳಿಲ್ಲದೆ, ಸ್ವಾನುಭವದ ಆಧಾರದಲ್ಲೇ ಸುತ್ತಣ ಜನರಿಗೆ ನಿರ್ದೇಶನಗಳನ್ನು ನೀಡಿದರು. ಅನುಭಾವವು ಶಾಬ್ದಿಕ ವಿವೇಚನೆ–ನಿರ್ವಚನಗಳನ್ನು ಮೀರಿ ನಿಂತಿದೆ ಎಂಬ ಮರ್ಮವನ್ನು ತಿಳಿದಿದ್ದರೂ ಶರೀಫರು ನಾಡ ನುಡಿಯಲ್ಲಿ ಪೋಣಿಸಿದ ತತ್ತ್ವಪದಗಳು ಉಪನಿಷದ್ವಚನಗಳಂತೆ ಆತ್ಮಾನುಭವದ ವಚನರತ್ನಗಳನ್ನು ಹೊಂದಿವೆ. ಹಾಗಾಗಿ ನಿಜವಾದ ಧಾರ್ಮಿಕ, ನಿಜವಾದ ಜ್ಞಾನಿ, ನಿಜವಾದ ಆಧ್ಯಾತ್ಮಿಕ ಜೀವಿ ಎಂಬುದಕ್ಕೆ ಉತ್ತಮ ನಿದರ್ಶನವೆಂದರೆ ಸಂತ ಶಿಶುನಾಳ ಶರೀಫರು.

**ತಂದೆ ಶಿಶುನಾಳಧೀಶ ಇಂದು ನಮಗೆ ಪಾಲಿಸಿದ**
**ಬಿಂದು ವಸ್ತು ಸವಿದು ಪರಮಾನಂದದೊಳಗೆ ಮೆರೆಯುತಿರಲು**

******

ಟಿಪ್ಪಣಿ

೧ ಶರಣರ ಅನುಭಾವ ಸಾಹಿತ್ಯ. ಪುಟ ೧೬೪, ೧೬೫

೨. ಶರಣರ ಅನುಭಾವ ಸಾಹಿತ್ಯ. ಪುಟ ೧೬೬

೩ ಭಾರತೀಯ ಆಧ್ಯಾತ್ಮಿಕ ಪರಂಪರೆ ಪುಟ ೪೪೮

೪ ಭಗವದ್ಗೀತೆ ಅಧ್ಯಾಯ ೪ ಶ್ಲೋಕ ೧೧

# ಪರಾಮರ್ಶನ ಗ್ರಂಥಗಳು


| | | | |
|---|---|---|---|
| ೧. | ಕೃಷ್ಣ ಕೊಲ್ಹಾರ ಕುಲಕರ್ಣಿ | ಕಾಖಂಡಕೀ ಶ್ರೀ ಮಹಿಪತಿ ರಾಯರು | ೧೯೮೯ |
| ೨. | ಜೋಶಿ . ಶಂ. ಬಾ | ಕರ್ನಾಟಕ ಸಂಸ್ಕೃತಿಯ ಪೂರ್ವ ಪೀಠಿಕೆ<br>ಸಮಾಜ ಬುಕ್ ಡಿಪೋ ಧಾರವಾಡ | ೧೯೭೭ |
| ೩. | ಜನಾರ್ದನ ಭಟ್ ಬಿ (ಸಂ)<br>ಕರ್ನಾಟಕ ಸಾಹಿತ್ಯ ಅಕಾಡೆಮಿ ಬೆಂಗಳೂರು | ಸಾಹಿತ್ಯ ವಿಮರ್ಶೆ | ೨೦೦೨ |
| ೪. | ಜನಾರ್ದನ ರಾಮದಾಸಿ (ಪ್ರ)<br>ಹೊನ್ನಾವರ | ಶ್ರೀಧರ ವಚನಾಮೃತ ಧಾರೆ –2 | ೨೦೦೫ |
| ೫ | ತಾರಾನಾಥ ಪಂಡಿತ | ಧರ್ಮಸಂಭವ<br>ಪ್ರಕಾಶಕರು ಡಿ.ವಿ.ಕೆ ಮೂರ್ತಿ ಮೈಸೂರು | ೨೦೦೫ |
| ೬ | ತಿಪ್ಪೇರುದ್ರ ಸ್ವಾಮಿ ಎಚ್. | ಶರಣರ ಅನುಭಾವ ಸಾಹಿತ್ಯ<br>ಪ್ರಕಾಶಕರು ಡಿ.ವಿ.ಕೆ ಮೂರ್ತಿ ಮೈಸೂರು | ೨೦೦೫ |
| ೭. | ತಿಪ್ಪೇರುದ್ರ ಸ್ವಾಮಿ ಎಚ್. | ಕನ್ನಡದಲ್ಲಿ ಅನುಭಾವ ಸಾಹಿತ್ಯ<br>ಪ್ರಸಾರಾಂಗ ಮಾನಸ ಗಂಗೋತ್ರಿ, ಮೈಸೂರು | ೧೯೮೦ |
| ೮. | ತೀರ್ಥರಾಮ್ ವಳಲಂಬೆ | ವಿಚಾರವಾದ ವಿಜ್ಞಾನ ಅಧ್ಯಾತ್ಮ ಮತ್ತು ದೇವರು<br>ಪ್ರಕಾಶಕರು ಯಾನ ಮಂಗಳೂರು | ೨೦೦೭ |
| ೯ | ನರಸಿಂಹ ಶರ್ಮ, ಶೃಂಗಗಿರಿ ಕವಿ | ವೇದಾಂತ ಸಿದ್ಧಾಂತ<br>ವೇದಾಂತ ಸಿದ್ಧಾಂತ ಪ್ರಕಾಶನ ಸಮಿತಿ, ಮೈಸೂರು | ೧೯೭೭ |
| ೧೦ | ಪ್ರಭವಾನಂದ ಸ್ವಾಮಿ | ಭಾರತೀಯ ಆಧ್ಯಾತ್ಮಿಕ ಪರಂಪರೆ<br>ಶ್ರೀ ರಾಮಕೃಷ್ಣಾಶ್ರಮ ಮೈಸೂರು | ೧೯೯೬ |
| ೧೧ | ಬಸವರಾಜು ಎಲ್. | ಪರಮಾರ್ಥ (ಸರ್ವಜ್ಞ ವಚನಗಳು)<br>ಗೀತಾ ಬುಕ್ ಹೌಸ್, ಮೈಸೂರು | ೧೯೭೨ |
| ೧೨ | ಬಸವರಾಜ ಕಲ್ಗುಡಿ | ಅನುಭಾವ : ಸಾಂಸ್ಕೃತಿಕ ಸಮಸ್ಯೆ ಮತ್ತು ಹುಡುಕಾಟ<br>ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು | ೧೯೯೭ |
| ೧೩ | ಬಾಲಸುಬ್ರಹ್ಮಣ್ಯ ಎನ್. | ವೇದಾಂತಸಾರ (ಕನ್ನಡ ಅನುವಾದ)<br>ಕಾವ್ಯಾಲಯ ಮೈಸೂರು | ೧೯೭೩ |
| ೧೪ | ಬೇಂದ್ರೆ ದ.ರಾ. | ಸಾಹಿತ್ಯ ಮತ್ತು ವಿಮರ್ಶೆ | ೧೯೩೬ |
| ೧೫ | ರಹಮತ್ ತರೀಕೆರೆ | ಕರ್ನಾಟಕದ ಸೂಫಿಗಳು<br>ಪ್ರಸಾರಾಂಗ ಕನ್ನಡ ವಿ.ವಿ. ಹಂಪಿ | ೧೯೯೮ |
| ೧೬ | ರಹಮತ್ ತರೀಕೆರೆ | ಅನುಭಾವಿಗಳ ಅಧ್ಯಯನದಲ್ಲಿ ತೊಡಕು (ಲೇಖನ)<br>ಕರ್ನಾಟಕ ಸಾಹಿತ್ಯ ಅಕಾಡೆಮಿ | ೨೦೦೨ |
| ೧೭ | ರಾನಡೆ ಆರ್.ಡಿ. | ಪರಮಾರ್ಥ ಸೋಪಾನ<br>ಶ್ರೀ ಗುರುದೇವ ರಾನಡೆ ಸಮಾಧಿ ಟ್ರಸ್ಟ್ | ೨೦೦೬ |
| ೧೮ | ರಾನಡೆ ಆರ್.ಡಿ. | ಉಪನಿಷತ್ ರಹಸ್ಯವು (ಕನ್ನಡ ಅನುವಾದ)<br>ಶ್ರೀ ಗುರುದೇವ ರಾನಡೆ ಸಮಾಧಿ ಟ್ರಸ್ಟ್ | ೨೦೦೪ |

| | | | |
|---|---|---|---|
| ೧೯ | ರಾಮಚಂದ್ರ ಪ್ರಭು | ಸಂತ ಶಿಶುನಾಳ ಶರೀಫ್ ಸಾಹೇಬರು<br>ಜನಪದ ಪ್ರಕಾಶನ, ಬೆಂಗಳೂರು | ೧೯೯೯ |
| ೨೦ | ಲಕ್ಷ್ಮೀನಾರಾಯಣ ಭಟ್ಟ. ಎನ್. ಎಸ್. | ಶಿಶುನಾಳ ಶರೀಫ್ ಸಾಹೇಬರ ಗೀತೆಗಳು<br>ಕ್ಷಮಾ ಪ್ರಕಾಶನ, ಬೆಂಗಳೂರು | ೨೦೦೦ |
| ೨೧ | ವಿಜಯ ಶ್ರೀ ಸಬರದ | ಕಡಕೋಳ ಮಡಿವಾಳಪ್ಪ ಮತ್ತು ಶಿಶುನಾಳ ಶರೀಫರ ಹಾಡುಗಳಲ್ಲಿ ಅನುಭಾವದ ಅಭಿವ್ಯಕ್ತಿ (ಲೇಖನ)<br>ಕರ್ನಾಟಕ ಸಾಹಿತ್ಯ ಅಕಾಡೆಮಿ | ೨೦೦೨ |
| ೨೨ | ವೆಂಕಟಾಚಲ ಶಾಸ್ತ್ರಿ ಟಿ.ವಿ. | ಶ್ರೀವತ್ಸ ನಿಘಂಟು<br>ಕನ್ನಡ ಪುಸ್ತಕ ಪ್ರಾಧಿಕಾರ | ೧೯೯೯ |
| ೨೩ | ಶಿವಾನಂದ ಗುಬ್ಬಣ್ಣವರ | ಶಿಶುನಾಳ ಶರೀಫರ ಗೀತೆಗಳು<br>ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ | ೧೯೮೫ |
| ೨೪ | ಶಿವಾನಂದ ಗುಬ್ಬಣ್ಣವರ | ಶಿಶುನಾಳ ಶರೀಫ್ ಸಾಹೇಬರು ಹಾಗೂ ಅವರ ಅನುಭಾವ ಪದಗಳು<br>ಪ್ರಸಾರಾಂಗ ಕರ್ನಾಟಕ ವಿ. ವಿ. ಧಾರವಾಡ | ೧೯೮೫ |
| ೨೫ | ಶ್ರೀನಿವಾಸಾಚಾರ್ಯ ಲಕ್ಷ್ಮೀಪುರಂ | ಹಿಂದೂ ದರ್ಶನ ಸಾರ<br>ಮೈಸೂರು ವಿಶ್ವವಿದ್ಯಾಲಯ | ೧೯೪೦ |
| ೨೬ | ಶಿವರುದ್ರಪ್ಪ ಜಿ.ಎಸ್. | ಸಮಗ್ರ ಕನ್ನಡ ಸಾಹಿತ್ಯ ಚರಿತ್ರೆ<br>ಪ್ರಸಾರಾಂಗ ಬೆಂಗಳೂರು ವಿ.ವಿ. | ೧೯೭೭ |
| ೨೭ | ಸುಂಕದ ಆರ್.ಎಸ್. | ಶಿಶುನಾಳರ ಅನುಭಾವ ಗೀತಮಂಜರಿ<br>ಸಮಾಜ ಪುಸ್ತಕಾಲಯ ಧಾರವಾಡ | ೨೦೦೩ |
| ೨೮ | ಸ್ವಾಮಿ ರಾಮ | ಹಿಮಾಲಯದ ಮಹಾತ್ಮರ ಸನ್ನಿಧಿಯಲ್ಲಿ<br>ಕನ್ನಡ ಅನುವಾದ ಡಿ.ಕೆ. ಶ್ಯಾಮಸುಂದರ ರಾವ್ ಬೆಂಗಳೂರು. | ೧೯೯೬ |
| ೨೯ | ಸ್ವಾಮಿ ಹರ್ಷಾನಂದ | ಜೀವನ್ಮುಕ್ತಿ ವಿವೇಕ– ವಿದ್ಯಾರಣ್ಯಕೃತ (ಕನ್ನಡ ಅನುವಾದ) ಶ್ರೀ ರಾಮಕೃಷ್ಣಾಶ್ರಮ, ಮೈಸೂರು | ೧೯೬೭ |
| ೩೦ | ಹರಿದಾಸ ಭಟ್ಟಾಚಾರ್ಯ | ಯುಗಯಾತ್ರೀ ಭಾರತೀಯ ಸಂಸ್ಕೃತಿ ಸಂಪುಟ 1.2.3.<br>ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ | ೧೯೭೫ |

**ಸಂಸ್ಕೃತ :**

**ಉಪನಿಷತ್ತುಗಳು:** ಉಪನಿಷತ್ ಸಂಗ್ರಹ ೧೯೮೪
ಪ್ರಕಾಶಕರು ಮೋತಿಲಾಲ ಬನಾರಸಿದಾಸ್ ದೆಹಲಿ

೧ ಕಠ
೨ ಹಂಸ
೩ ಆರುಣಿಕ
೪ ಅಮೃತನಾದ
೫ ಮೈತ್ರಾಯಣೀ
೬ ಧ್ಯಾನಬಿಂದು
೭ ನಾದಬಿಂದು
೮ ಯೋಗತತ್ತ್ವ
೯ ತ್ರಿಶಿಖಿ ಬ್ರಾಹ್ಮಣ
೧೦ ಯೋಗಚೂಡಾಮಣಿ

| | | | |
|---|---|---|---|
| ೧೧ | ಯೋಗಶಿಖಾ | | |
| ೧೨ | ಅಧ್ಯಾತ್ಮ | | |
| ೧೩ | ಅವಧೂತ | | |
| ೧೪ | ಯೋಗಕುಂಡಲೀ | | |
| ೧೫ | ಯೋಗದರ್ಶನಾಂಕ | ಭಾರತಧರ್ಮ ಮಹಾಮಂಡಲ ವಾರಾಣಸೀ | ೧೯೬೪ |
| ೧೬ | ಲಲಿತಾಸಹಸ್ರನಾಮ | ಸೌಭಾಗ್ಯ ಭಾಸ್ಕರಭಾಷ್ಯನಾಗ್ ಪಬ್ಲಿಷರ್ಸ್, ದೆಹಲಿ | ೧೯೮೫ |
| ೧೭ | ಭಗವದ್ಗೀತಾ | ಶ್ರೀಧರೀಯ ವ್ಯಾಖ್ಯಾ ನಿರ್ಣಯ ಸಾಗರ ಮುದ್ರಣಾಲಯ | ೧೯೩೫ |
| ೧೮ | ವಿವೇಕ ಚೂಡಾಮಣಿ | ಶ್ರೀ ಚಂದ್ರಶೇಖರಭಾರತೀ ಸ್ವಾಮಿ ವಿರಚಿತ ವ್ಯಾಖ್ಯಾ ಶೃಂಗೇರಿ ಜಗದ್ಗುರು ಸಂಸ್ಥಾನ | ೧೯೫೭ |
| ೧೯ | ಶಾರದಾ ತಿಲಕ ತಂತ್ರಂ (ರಾಘವ ಕೃತ ಟೀಕೆ) | ಆರ್ಥರ್ ಅವಲಾನ್ ಮೋತಿಲಾಲ್ ಬನಾರಸಿ ದಾಸ್ ಪಬ್ಲಿಷರ್ಸ್ | ೧೯೮೨ |
| ೨೦ | ಮಹಾನಿರ್ವಾಣ ತಂತ್ರಂ (ಹರಿಹರಾನಂದ ಭಾರತೀ ಕೃತ ಟೀಕೆ) | ಆರ್ಥರ್ ಅವಲಾನ್ ಮೋತಿಲಾಲ್ ಬನಾರಸಿ ದಾಸ್ ಪಬ್ಲಿಷರ್ಸ್ | ೧೯೮೯ |

English

| | | | |
|---|---|---|---|
| 1 | Ranade R.D. | Pathway to God in Kannada Literature Bhavans Book University Bombay | 1989 |
| 2 | Ranade R.D. | Pathway to God in Hindi Literature Shree Gurudev Ranade Samadhi Trust Bijapur | 1986 |
| 3 | Ranade R.D. | Mysticism in Maharastra Mothilal Banarasidas Delhi | 1988 |
| 4 | Hazrat Inayath Khan | The Divinity of the Human Soul | 1989 |
| 5 | Hazrat Inayath Khan | Spiritual Liberty Mothilal Banarasidas Delhi | 1990 |

